ಪರಮದಯಾಮಯ ಕರುಣಾಳುವಾದ ಅಲ್ಲಾಹನ ನಾಮದಿಂದ

# ಪ್ರಕಾಶಕರ ಮಾತು

ಮಹಾನ್ ವ್ಯಕ್ತಿಗಳ ಬಾಲ್ಯಕಾಲದ ಘಟನೆಗಳು ಬಹಳ ಸ್ವಾರಸ್ಯಕರವಾಗಿರುತ್ತವೆ. ಮುಂದೆ ಜೀವನದಲ್ಲಿ ಅವರು ಸಾಧಿಸುವ ಮಹತ್ಕಾರ್ಯಗಳ ಪ್ರತಿರೂಪ ಅವರ ಬಾಲ್ಯದಲ್ಲಿ ಗೋಚರಿಸುತ್ತಿರುತ್ತದೆ. ಈ ಲೋಕದ ಸುಧಾರಣೆಗಾಗಿ ಅನೇಕ ಮಹಾನ್ ವ್ಯಕ್ತಿಗಳು ಬಂದಿದ್ದಾರೆ. ಅವರ ಪೈಕಿ ಅಲ್ಲಾಹನಿಂದ ನೇಮಿಸಲ್ಪಟ್ಟ ಪ್ರವಾದಿಗಳು ಮುಂಚೂಣಿಯಲ್ಲಿದ್ದಾರೆ. ಅಲ್ಲಾಹನ ನೇರ ಮಾರ್ಗದರ್ಶನದಲ್ಲಿ ಅವರು ಲೋಕ ಕಲ್ಯಾಣದ, ಸಾರ್ಥಕ ಬದುಕು ಸಾಗಿಸಿ ಜನತೆಗೆ ಮಾದರಿಯಾಗಿದ್ದಾರೆ. ಅಂತಿಮ ಪ್ರವಾದಿ ಮುಹಮ್ಮದ್(ಸ) ಮಾನವ ಬದುಕಿನಲ್ಲಿ ಸಂಪೂರ್ಣ ಕ್ರಾಂತಿಯನ್ನು ತಂದ ಮಹಾನ್ ನಾಯಕರಾಗಿದ್ದಾರೆ. ಅವರ ಅನುಯಾಯಿಗಳು ಮತ್ತು ಅವರನ್ನು ಅನುಸರಿಸಿದವರಲ್ಲೂ ಅನೇಕ ಮಹಾನ್ ವ್ಯಕ್ತಿಗಳು ಲೋಕ ಕಲ್ಯಾಣದ ಕಾರ್ಯಗಳನ್ನು ಮಾಡಿ ಕೀರ್ತಿ ಶೇಷರಾಗಿದ್ದಾರೆ.

ಈ ಕಿರು ಪುಸ್ತಕದಲ್ಲಿ ಕೆಲವು ಪ್ರವಾದಿಗಳ, ಸಹಾಬಿಗಳ, ಇಮಾಮರ ಮತ್ತು ಮಹಾ ವಿದ್ವಾಂಸರ ಬಾಲ್ಯಕಾಲದ ಘಟನೆಗಳನ್ನು ಉತ್ತರ ಪ್ರದೇಶದ ಮಾಯಿಲ್ ಖೈರಾಬಾದಿಯವರು ಸಂಗ್ರಹಿಸಿ ಬರೆದಿದ್ದಾರೆ. ಮಕ್ಕಳಿಗಾಗಿಯೇ ಉರ್ದುವಿನಲ್ಲಿ ರಚಿಸಿದ ಈ ಪುಸ್ತಕವನ್ನು ಎಂ.ಡಿ. ಬಳಗನೂರ M.A. ಅವರು ಕನ್ನಡಕ್ಕೆ ಸುಂದರವಾಗಿ ಅನುವಾದಿಸಿದ್ದಾರೆ. ಎಳೆಯ ಮಕ್ಕಳಲ್ಲಿ ಧಾರ್ಮಿಕ ಸ್ಫೂರ್ತಿಯನ್ನು ಬೆಳೆಸಲು ಮತ್ತು ಅವರನ್ನು ಧರ್ಮ ಮಾರ್ಗದಲ್ಲಿ ನಡೆಸಲು ಈ ಪುಸ್ತಕದ ಅಧ್ಯಯನವು ಸಹಕಾರಿಯಾಗ ಬಲ್ಲುದು. 'ಸತ್ಯವಿಶ್ವಾಸಿಗಳೇ, ನಿಮ್ಮನ್ನೂ ನಿಮ್ಮ ಮನೆ ಮಂದಿಯನ್ನೂ ನರಕಾಗ್ನಿಯಿಂದ ರಕ್ಷಿಸಿರಿ' ಎಂಬ ಕುರ್‌ಆನ್ ವಚನದ ಪ್ರಕಾರ ಮಕ್ಕಳ ಸುಧಾರಣೆಯು ಹೆತ್ತವರ ಕರ್ತವ್ಯವಾಗಿದೆ. ಈ ಪುಸ್ತಕದ ಅಧ್ಯಯನವು ಅದಕ್ಕೆ ಪ್ರೇರಕವಾಗಲೆಂದು ಹಾರೈಸುತ್ತೇವೆ.

— ಶಾಂತಿ ಪ್ರಕಾಶನ

# ಅನುಕ್ರಮಣಿಕೆ

# ಪ್ರವಾದಿ ಯೂಸುಫ್(ಅ)ರ ಬಾಲ್ಯ

ಪ್ರವಾದಿ ಯೂಸುಫ್(ಅ)ರವರು ಅಲ್ಲಾಹನ ಪ್ರಸಿದ್ಧ ಪ್ರವಾದಿಗಳಲ್ಲೊಬ್ಬರಾಗಿದ್ದಾರೆ. ವರ ತಂದೆ ಹ. ಯಅ್‌ಕೂಬ್(ಅ), ಅಜ್ಜ ಹ. ಇಸ್‌ಹಾಕ್(ಅ) ಹಾಗೂ ಅವರ ುತ್ತಜ್ಜ ಹ. ಇಬ್‌ರಾಹೀಮ್(ಅ)ರವರು ಕೂಡ ಪ್ರವಾದಿಗಳಾಗಿದ್ದರು.

ಹ. ಯಅ್‌ಕೂಬ್(ಅ) ಕನ್‌ಆನ್ ಎಂಬ ಊರಲ್ಲಿ ವಾಸಿಸುತ್ತಿದ್ದರು. ಅಲ್ಲಿಯೇ ಯೂಸುಫ್ ಜನಿಸಿದರು.

ಹ. ಯೂಸುಫ್(ಅ)ರ ಸಂಪೂರ್ಣ ಚರಿತ್ರೆಯನ್ನು ಅಲ್ಲಾಹನು ಕುರ್‌ಆನಿನಲ್ಲಿ ವರಿಸಿದ್ದಾನೆ. ಈ ಚರಿತ್ರೆಯನ್ನು ಸರ್ವ ಚರಿತ್ರೆಗಳ ಪೈಕಿ ಅತ್ಯುತ್ತಮ ಚರಿತ್ರೆ ಎಂದು ರ್ಣಿಸಿದ್ದಾನೆ. ನಾವು ಈ ಅತ್ಯುತ್ತಮ ವೃತ್ತಾಂತದೊಂದಿಗೆ ಈ ಪುಸ್ತಕವನ್ನು ಆರಂಭಿ ತ್ತೇವೆ. ಈ ವೃತ್ತಾಂತವು ಅತ್ಯಂತ ಮನಮೋಹಕ ಹಾಗೂ ನೀತಿಬೋಧಕವಾಗಿದೆ. ಳಿರಿ ಮತ್ತು ನೀತಿಯಂತೆ ನಡೆಯಿರಿ.

ಹ. ಯೂಸುಫ್(ಅ)ರಿಗೆ ಹನ್ನೆರಡು ಜನ ಅಣ್ಣತಮ್ಮಂದಿರು ಇದ್ದರು. ಇವರಲ್ಲಿ ನ್ಯಾಮೀನ್ ಮತ್ತು ಹ. ಯೂಸುಫ್(ಅ)ರವರು ಒಂದೇ ತಾಯಿಯ ಮಕ್ಕಳಾಗಿದ್ದರು. ಳಿದವರು ಮಲತಾಯಿಯ ಮಕ್ಕಳಾಗಿದ್ದರು. ಯೂಸುಫ್(ಅ) ಅತ್ಯಂತ ುದರ, ಸಚ್ಚಾರಿತ್ರ್ಯವುಳ್ಳವರು ಹಾಗೂ ಬುದ್ಧಿವಂತರಾಗಿದ್ದರು. ಅವರು ತನ್ನ ಹೆಚ್ಚಿನ ಮಯವನ್ನು ತನ್ನ ತಂದೆ ಹ. ಯಅ್‌ಕೂಬ್(ಅ)ರೊಂದಿಗೆ ಅಲ್ಲಾಹನ ಆರಾಧನೆಯಲ್ಲಿ ಯುತ್ತಿದ್ದರು.

ಒಂದು ದಿನ ಯೂಸುಫ್(ಅ)ರು ನಿದ್ರೆಯಿಂದ ಬೆಳಿಗ್ಗೆ ಎದ್ದು, ತನ್ನ ತಂದೆ ಅ್‌ಕೂಬ್(ಅ)ರಲ್ಲಿ, "ಅಪ್ಪಾ, ರಾತ್ರಿಯಲ್ಲಿ ನನಗೊಂದು ಕನಸು ಬಿತ್ತು. ಆ ಕನಸಿನಲ್ಲಿ ನ್ನೊಂದು ನಕ್ಷತ್ರಗಳು ಹಾಗೂ ಸೂರ್ಯ ಚಂದ್ರರು ನನಗೆ ಸಾಷ್ಟಾಂಗ ಾಡುತ್ತಿರುವುದನ್ನು ನಾನು ಕಂಡೆ" ಎಂದು ಹೇಳಿದರು. ಯಅ್‌ಕೂಬ್(ಅ) ತನ್ನ ಗನ ಈ ಕನಸನ್ನು ಕೇಳಿ, "ಮಗನೇ! ಈ ಕನಸನ್ನು ನಿನ್ನ ಸೋದರರ ಬಳಿ

ಹೇಳಬೇಡ. ಹೇಳಿದರೆ ಅವರು ನಿನ್ನನ್ನು ಪೀಡಿಸುವರು. ನನ್ನ ಅನಿಸಿಕೆಯ ಪ್ರಕ
ನಿನ್ನ ಪ್ರಭುವು ನಿನ್ನನ್ನು ಆಯ್ಕೆ ಮಾಡಿ, ಪ್ರವಾದಿಯನ್ನಾಗಿ ಮಾಡಲಿದ್ದಾನೆ. ನಿ
ಜ್ಞಾನವನ್ನು ನೀಡಿ ನಿನ್ನ ಅಜ್ಜ ಇಸ್‌ಹಾಕ್ ಹಾಗೂ ಮುತ್ತಜ್ಜ ಹ. ಇಬ್‌ರಾಹೀಮ್‌ರ
ತನ್ನ ಪ್ರವಾದಿಗಳನ್ನಾಗಿ ಮಾಡಿರುವಂತೆ ನಿನ್ನನ್ನು ಸಹ ಕರುಣಿಸಲಿದ್ದಾನೆ" ಎಂ
ಮಗನನ್ನು ಸಮಾಧಾನ ಪಡಿಸಿದರು.

ಈ ಕನಸಿನ ನಂತರ ಹ. ಯಅ್‌ಕೂಬ್‌ರ(ಅ) ಪಿತೃ ವಾತ್ಸಲ್ಯ ಮತ್ತ
ಬೆಳೆಯಿತು. ಆದ್ದರಿಂದ ಅವರು ಹ. ಯೂಸುಫ್(ಅ)ರನ್ನು ಯಾವಾಗಲೂ
ಹತ್ತಿರವೇ ಇಟ್ಟುಕೊಳ್ಳತೊಡಗಿದರು. ಕ್ಷಣ ಮಾತ್ರವೂ ತನ್ನ ದೃಷ್ಟಿಯಿಂದ ಅವ
ದೂರವಿರುವುದನ್ನು ಸಹಿಸುತ್ತಿರಲಿಲ್ಲ. ಇದನ್ನು ಕಂಡ ಮಲ ಸೋದರ
ಹ. ಯೂಸುಫ್(ಅ)ರ ಬಗ್ಗೆ ಅಸೂಯೆಯಿಂದ ವರ್ತಿಸಲು ಆರಂಭಿಸಿದ
ಹ.ಯೂಸುಫ್(ಅ)ರನ್ನು ಕೊಂದು ಹಾಕುವ ಷಡ್ಯಂತ್ರವನ್ನು ಅವರು ರೂಪಿಸಿದ
ಇವರೆಲ್ಲರೂ ಆಡು ಮೇಯಿಸಲು ಕಾಡಿಗೆ ಹೋಗುತ್ತಿದ್ದರು. ಒಂದು
ಯೂಸುಫ್(ಅ)ರನ್ನು ತಮ್ಮೊಂದಿಗೆ ಕರೆದು ಕೊಂಡು ಹೋಗಲು ತಮ್ಮ ತಂದೆಯಿಂ
ಅನುಮತಿ ಪಡೆದುಕೊಂಡರು.

ಅವರು ಹ.ಯೂಸುಫ್‌ರನ್ನು ಕಾಡಿಗೆ ಕರೆದುಕೊಂಡು ಹೋಗಿ ಒಂದು ಪಾ
ಬಾವಿಗೆ ತಳ್ಳಿ ಬಿಟ್ಟರು. ಮರಳಿ ಮನೆಗೆ ಬಂದು ತಮ್ಮ ತಂದೆ
ಯಅ್‌ಕೂಬ್(ಅ)ರೊಂದಿಗೆ, ಯೂಸುಫ್(ಅ)ನನ್ನು ತೋಳವು ಹಿಡಿದುಕೊಂ
ಹೋಯಿತು ಎಂದು ಹೇಳಿದರು. ಇದನ್ನು ಕೇಳಿದ ಹ. ಯಅ್‌ಕೂಬ್(ಅ), ತ
ಪ್ರೀತಿಯ ಮಗನನ್ನು ಕಳೆದು ಕೊಂಡು ದುಃಖಿತಪ್ತರಾದರು. "ಅಯ್ಯೋ! ನ
ಯೂಸುಫ್" ಎಂದು ರೋದಿಸಿ, ಅಲ್ಲಾಹನಲ್ಲಿ ಪ್ರಾರ್ಥಿಸಿ ಶಾಂತರಾದರು.

ಹ. ಯೂಸುಫ್(ಅ) ತನ್ನ ಬಾಲ್ಯದಲ್ಲಿ ಬಹಳ ಸದ್ಗುಣಿಯಾಗಿದ್ದರು.
ಹಿಂಸೆಗಾಗಿ ತನ್ನ ಸೋದರರನ್ನು ಶಪಿಸಲಿಲ್ಲ. ಪಾಳು ಬಾವಿಯಲ್ಲಿ ಬಿದ್ದ ಅವ
ಅದರಿಂದ ಮುಕ್ತಿ ಪಡೆಯಲು ಅಲ್ಲಾಹನಲ್ಲಿ ಪ್ರಾರ್ಥಿಸಿದರು. ಅಲ್ಲಾಹನು ಅ
ಪ್ರಾರ್ಥನೆಯನ್ನು ಕೇಳಿದನು. ಅಲ್ಲೊಂದು ಯಾತ್ರಾತಂಡ ಹೋಗುತ್ತಿ
ಅದರಲ್ಲಿನ ಜನರಿಗೆ ಬಾಯಾರಿಕೆಯಾಯಿತು. ಅವರು ಆ ಬಾವಿಯ ಕ
ಬಂದರು. ಒಬ್ಬನನ್ನು ನೀರು ತುಂಬಿ ತರಲು ಬಾವಿಗೆ ಕಳಿಸಿದರು. ಬಾವಿಯ
ಪಾತ್ರೆಯನ್ನು ಬಿಡುವಾಗ ಆತ ಒಬ್ಬ ಅತ್ಯಂತ ಸುಂದರ ಬಾಲಕನ
ಕಂಡನು. ಆ ಕೂಡಲೇ ಇದನ್ನು ಎಲ್ಲರಿಗೂ ತಿಳಿಸಿದನು. ಬಾಲಕನನ್ನು ಹೊ
ತೆಗೆಯಲಾಯಿತು. ಅವರೆಲ್ಲ ಈಜಿಪ್ಟ್‌ಗೆ ತೆರಳುತ್ತಿದ್ದರು. ಹ. ಯೂಸುಫ್(ಅ)ರ

ಮ್ಮೊಂದಿಗೆ ಕರೆದೊಯ್ದು, ಅಲ್ಲಿ ಅವರನ್ನು ಮಾರಿ ಬಿಟ್ಟರು.

ಹೌದು! ಮಾರಿ ಬಿಟ್ಟರು. ಆ ಕಾಲದಲ್ಲಿ ಪುರುಷರನ್ನು, ಸ್ತ್ರೀಯರನ್ನು, ಮಕ್ಕಳನ್ನು ಮಾರಾಟ ಮಾಡಲಾಗುತ್ತಿತ್ತು. ಮಾರಲ್ಪಟ್ಟ ಗಂಡಸರನ್ನು 'ಗುಲಾಮ' ಮತ್ತು ಹೆಂಗಸರನ್ನು 'ದಾಸಿ' ಎಂದು ಕರೆಯುತ್ತಿದ್ದರು. ಪ್ರವಾದಿಯ ಮಗ ಈಜಿಪ್ಟ್‌ಗೆ ತಲುಪಿ ಗುಲಾಮನಾಗಿ ಬಿಟ್ಟ. ಯೂಸುಫ್(ಅ)ರನ್ನು ಒಬ್ಬ ಐಶ್ವರ್ಯ ವಂತ ಖರೀದಿಸಿದ. ಯೂಸುಫ್(ಅ)ರು ಅವನ ಮನೆಯಲ್ಲಿ ಇರ ತೊಡಗಿದರು.

ಒಂದು ದಿನ ಈಜಿಪ್ಟ್‌ನ ದೊರೆ ಕನಸು ಕಂಡ. ಆ ಕನಸಿನ ಅರ್ಥವನ್ನು ತಿಳಿಸಲು ಅವನು ಜ್ಞಾನಿಗಳನ್ನು ಹಾಗೂ ಜ್ಯೋತಿಷಿಗಳನ್ನು ಕೇಳಿದ. ಆದರೆ ಅವರ್ಯಾರಿಗೂ ಅದು ಸಾಧ್ಯವಾಗಲಿಲ್ಲ. ಯೂಸುಫರು ಇದನ್ನು ಕೇಳಿ ಅರ್ಥವನ್ನು ತಿಳಿಸಿದರಲ್ಲದೆ ಮುಂದೆ ದೊರೆ ಏನನ್ನು ಮಾಡಬೇಕೆಂಬುದನ್ನೂ ತಿಳಿಸಿದರು. ಯೂಸುಫ್(ಅ)ರ ಬುದ್ಧಿವಂತಿಕೆಯನ್ನು ಕಂಡ ಆ ದೊರೆ, ಖಜಾನೆಯ ಬೀಗದ ಕೈಗಳನ್ನು ಯೂಸುಫ್(ಅ)ರಿಗೆ ನೀಡಿ ನನ್ನ ಕಡೆಯಿಂದ ಮಾಡಬಯಸಿದ ಕಾರ್ಯವನ್ನು ನೀವೇ ಮಾಡಿರಿ ಎಂದು ಹೇಳಿದರು. ಬಳಿಕ ಯೂಸುಫ್(ಅ)ರು ದೇಶದ ಆಡಳಿತವನ್ನು ತನ್ನ ಕೈಗೆತ್ತಿಕೊಂಡರು. ಅತ್ಯಂತ ನಿಷ್ಠೆಯಿಂದ ಆಡಳಿತ ನಡೆಸಿದರು. ಪ್ರಜೆಗಳಿಗೆ ಇದರಿಂದ ಶಾಂತಿ ಮತ್ತು ಸುಖ ಸಿಕ್ಕಿತು. ಯೂಸುಫ್(ಅ)ರು ತಮ್ಮ ತಂದೆ ತಾಯಿಗಳನ್ನು ಅಣ್ಣ ತಮ್ಮಂದಿರನ್ನು ಈಜಿಪ್ಟ್‌ಗೆ ಕರೆಸಿಕೊಂಡರು. ಅವರೆಲ್ಲ ಈಜಿಪ್ಟ್‌ಗೆ ತಲುಪಿದಾಗ ಯೂಸುಫ್(ಅ)ರು ಸಿಂಹಾಸನದ ಮೇಲೆ ಕುಳಿತಿದ್ದರು. ಇವರೆಲ್ಲರೂ ಅವರ ಮುಂದೆ ಬಾಗಿ ಅವರಿಗೆ ಗೌರವ ತೋರಿದರು.

ಇದನ್ನು ನೋಡಿ, ಯೂಸುಫ್(ಅ)ರು ತಮ್ಮ ತಂದೆ ಯಅ್‌ಕೂಬ್‌ರಿಗೆ ಹೇಳಿದರು, "ಅಪ್ಪಾ! ನಾನು ಬಾಲ್ಯದಲ್ಲಿ ಕಂಡ ಕನಸಿನ ಸಾಕ್ಷಾತ್ಕಾರ ಇದಾಗಿದೆ. ನೀವು ಮತ್ತು ಅಮ್ಮ ಸೂರ್ಯಚಂದ್ರಗಳಾದರೆ, ಅಣ್ಣ ತಮ್ಮಂದಿರು ಹನ್ನೊಂದು ನಕ್ಷತ್ರಗಳು. ಈ ರೀತಿಯಾಗಿ ಅಲ್ಲಾಹನು ಆ ಕನಸನ್ನು ಸತ್ಯವನ್ನಾಗಿ ತೋರಿಸಿದನು. ಇದು ನನ್ನ ಪ್ರಭುವಿನ ಮಹಾ ಉಪಕಾರವಾಗಿದೆ. ನನ್ನ ಹಾಗೂ ನನ್ನ ಸೋದರರ ನಡುವೆ ಶೈತಾನನು ವೈರತ್ವವನ್ನು ಹಾಕಿದ್ದನು, ಆದರೆ ಅಲ್ಲಾಹನು ಮಾಡುವುದನ್ನು ಯಾರೂ ಅರಿಯಲಾರೆವು. ಆತನು ಸರ್ವಜ್ಞ ಮತ್ತು ಯುಕ್ತಿಪೂರ್ಣನಾಗಿದ್ದಾನೆ."

❖ ❖ ❖ ❖

# ಪ್ರವಾದಿ ಮೂಸಾ(ಅ)ರ ಬಾಲ್ಯ

ಪ್ರವಾದಿ ಮೂಸಾ(ಅ)ರ ಬಾಲ್ಯದ ಕತೆ ಅತ್ಯಂತ ಮನಮೋಹಕವೂ ಭಕ್ತಿಪೂರ್ಣವೂ ಆಗಿದೆ. ಹ. ಮೂಸಾ(ಅ) ಅಲ್ಲಾಹನ ಪ್ರಸಿದ್ಧ ಪ್ರವಾದಿಯಾಗಿದ್ದಾರೆ ಕುರ್‌ಆನಿನಲ್ಲಿ ಇವರ ಜೀವನದ ಪ್ರಸ್ತಾಪ ಮೇಲಿಂದ ಮೇಲೆ ಬಂದಿದೆ. ಇವರು ಮುಸ್ಲಿಮ್ ಕುಟುಂಬದಲ್ಲಿ ಜನಿಸಿದರು. ಇವರ ಪಾಲನೆ ಪೋಷಣೆ ಒಬ್ಬ ಸತ್ಯನಿಷೇಧಿ ದೊರೆಯ ಅರಮನೆಯಲ್ಲಿ ಆಯಿತು.

ಮೂಸಾರ(ಅ) ಕಾಲದಲ್ಲಿ ಒಬ್ಬ ರಾಜನಿದ್ದನು. ಅವನ ಹೆಸರು ಫಿರ್‌ಔನ್ ಆತನು ತನ್ನನ್ನು ತಾನೇ ದೇವನೆನಿಸಿಕೊಳ್ಳುತ್ತಿದ್ದನು. ಫಿರ್‌ಔನನ ಆಸ್ಥಾನದಲ್ಲಿ ಒಬ್ಬ ದೊಡ್ಡ ಪ್ರವಾದಿಯ ಕುಟುಂಬದ ಜನರಿದ್ದರು. ಇವರೆಲ್ಲ 'ಬನೀ ಇಸ್ರಾಈಲ್ ಎನಿಸಿಕೊಂಡಿದ್ದರು. ಫಿರ್‌ಔನ್ ಬನೀ ಇಸ್ರಾಈಲ್‌ರ ಮೇಲೆ ಕೆಂಡ ಕಾರುತ್ತಿದ್ದನು ಇವರು ಆತನ ವಿರುದ್ಧ ಬಂಡಾಯ ಎದ್ದು ಅಲ್ಲಿ ಅವನ ಸಿಂಹಾಸನವನ್ನು ಕಸಿದು ಕೊಳ್ಳುತ್ತಾರೆ ಎಂದು ಆತನಿಗೆ ಭಯವಿತ್ತು. ಆದ್ದರಿಂದ ಆತನು ಇವರಿಗೆ ಹಲವು ರೀತಿಯಿಂದ ಪೀಡಿಸುತ್ತಿದ್ದನು ಮತ್ತು ಮಾತು ಮಾತಿಗೆ ಕೊಂದು ಹಾಕುತ್ತಿದ್ದನು. ಬನೀ ಇಸ್ರಾಈಲರಿಗೆ ಗಂಡು ಮಗು ಹುಟ್ಟಿದರೆ ಅದನ್ನು ಕೊಲ್ಲಬೇಕು, ಹೆಣ್ಣು ಮಗು ಹುಟ್ಟಿದರೆ ಅದನ್ನು ಜೀವಂತವಾಗಿ ಬಿಟ್ಟು ಬಿಡಬೇಕು ಎಂದು ಆತನು ಆದೇಶ ಹೊರಡಿಸಿದ್ದನು. ಹೆಣ್ಣು ಮಕ್ಕಳಿಂದ ಆತನು ದಾಸಿಯ ಕೆಲಸ ಮಾಡಿಸುತ್ತಿದ್ದನು. ಹೀಗೆ, ಬನೀಇಸ್ರಾಈಲರ ಸಂತತಿ ದಿನೇ ದಿನೇ ಕಡಿಮೆಯಾಗುತ್ತಾ ಹೋಗುತ್ತಲಿದ್ದಿತು. ಬನೀಇಸ್ರಾಈಲರು ಮುಸ್ಲಿಮರಾಗಿದ್ದರು. ಅವರಲ್ಲಿನ ವಿಶ್ವಾಸ ಮತ್ತು ಶ್ರದ್ಧೆ, ದೃಢತೆ ಕಳೆದುಕೊಂಡಿತ್ತಾದರೂ ಅವರು ಫಿರ್‌ಔನನನ್ನು ದೇವನೆಂದು ಒಪ್ಪಿಕೊಳ್ಳಲು ಸಿದ್ಧ ರಿರಲಿಲ್ಲ. ಅಲ್ಲಾಹನ ಚಮತ್ಕಾರ ನೋಡಿಅ ಬನೀ ಇಸ್ರಾಈಲರಲ್ಲಿ ಮೂಸಾ(ಅ) ಜನಿಸಿದರು. ಇವರ ತಾಯಿ ಬಹಳ ಬುದ್ಧಿವಂತೆ ಮತ್ತು ದೇವನ ಮೇಲೆ ಭರವಸೆ ಇಡುವವರಾಗಿದ್ದರು. ಒಂದು ವೇಳೆ ಗಂಡು ಮಗು ಹುಟ್ಟಿದ ಸುದ್ದಿ ರಾಜನಿಗೆ ತಿಳಿದರೆ ಆತನು ಕೊಂದು ಹಾಕುತ್ತಾನೆಂದು ಭಾವಿಸಿ ಒಂದು ಮರದ ಪೆಟ್ಟಿಗೆಯಲ್ಲಿ

ನ್ನ ಮಗು ವನ್ನು ಮಲಗಿಸಿ, ಆ ಪೆಟ್ಟಿಗೆಯನ್ನು ನೈಲ್ ನದಿಯಲ್ಲಿ ಹರಿಯ ಬಿಟ್ಟಳು ಮತ್ತು ತನ್ನ ಮಗಳಿಗೆ ನದಿ ದಂಡೆಯ ಮೂಲಕ ಆ ಪೆಟ್ಟಿಗೆಯ ಜೊತೆ ಹೋಗಿ ಅದು ಎಲ್ಲಿ ಮುಟ್ಟುತ್ತದೆ ಎಂದು ನೋಡಲು ಹೇಳಿದಳು. ಆ ಪುಟ್ಟ ಬಾಲಕಿಯು ದಡದ ಮೇಲೆ ಪೆಟ್ಟಿಗೆಯನ್ನು ನೋಡುತ್ತ ಹೆಜ್ಜೆ ಹಾಕುತ್ತಿದ್ದಳು.

ಸ್ವಲ್ಪ ದೂರದಲ್ಲಿ ಫಿರ್‌ಔನನ ಅರಮನೆಯಿತ್ತು. ಅರಮನೆಯ ಮಾಳಿಗೆ ಮೇಲೆ ನಿಂತು ಆತನ ಹೆಂಡತಿ ನದಿಯನ್ನು ನೋಡಿ ರಂಜಿಸುತ್ತಿದ್ದಳು. ಪೆಟ್ಟಿಗೆ ಯನ್ನು ನೋಡಿದ ಆಕೆ ಅದನ್ನು ಹೊರ ತೆಗೆಯಲು ಆದೇಶಿಸಿದಳು. ಪೆಟ್ಟಿಗೆ ಯನ್ನು ಹೊರ ತೆಗೆಯಲಾಯಿತು. ಅದನ್ನು ತೆರೆದಾಗ ಅದರಲ್ಲಿ ಮಗುವಿತ್ತು.

ಫಿರ್‌ಔನನ ಹೆಂಡತಿಗೆ ಮಕ್ಕಳಿರಲಿಲ್ಲ. ಆಕೆ ಈ ಮಗುವನ್ನು ಪಾಲನೆಗಾಗಿ ಪಡೆದು ಕೊಂಡಳು. ಇದನ್ನು ಕಂಡ ಫಿರ್‌ಔನನಿಗೆ ಸಂಶಯ ಬಂದಿತು. ಅದನ್ನು ಕೊಲ್ಲಲು ಬಯಸಿದನು. ಆದರೆ ಆತನ ಹೆಂಡತಿ ತಿಳಿ ಹೇಳಿ ತಡೆದಳು. ಹೀಗೆ ಮಗು ಅರಮನೆಯಲ್ಲಿಯೇ ಉಳಿಯಿತು.

ಮಗುವಿಗೆ ಹಾಲು ಕುಡಿಸಲು ಒಂದು ಹೆಂಗಸಿನ ಅವಶ್ಯಕತೆ ಉಂಟಾಯಿತು. ಈಜಿಪ್ಟ್ ನಗರದ ಪ್ರಸಿದ್ಧ ದಾಯಿಗಳು ಬಂದರು. ಅವರೆಲ್ಲರೂ ಮೂಸಾರಿಗೆ(ಅ) ಹಾಲುಣಿಸಲು ಎಷ್ಟು ಪ್ರಯತ್ನಿಸಿದರೂ ಮೂಸಾ(ಅ) ಹಾಲು ಕುಡಿಯಲೇ ಇಲ್ಲ. ಇದನ್ನು ನೋಡಿದ ಪೆಟ್ಟಿಗೆಯ ಜೊತೆಗೆ ಅರಮನೆಗೆ ಹೋದ ಅವರ ಸೋದರಿ ಮುಂದೆ ಹೋಗಿ "ನೀವು ಬಯಸಿದರೆ, ನಾನು ಈ ಮಗುವಿಗಾಗಿ ಒಬ್ಬಳು ಹಾಲೂಡಿಸುವವಳನ್ನು ಕರೆ ತರುವೆ" ಎಂದು ಹೇಳಿದಳು, "ಕರೆದು ಕೊಂಡು ಬಾ" ಎಂದು ಆಕೆಗೆ ಆದೇಶಿಸಲಾಯಿತು. ಮೂಸಾ(ಅ)ರ ಸೋದರಿ ಮನೆಗೆ ಬಂದು ತನ್ನ ತಾಯಿಯನ್ನು ಅರಮನೆಗೆ ಕರೆದುಕೊಂಡು ಹೋದಳು. ತನ್ನ ತಾಯಿಯ ಹಾಲನ್ನು ಮೂಸಾ(ಅ) ಕುಡಿದರು. ಹೀಗಾಗಿ ಮಗುವಿಗೆ ಹಾಲುಣಿಸಲು ಅವರನ್ನು ಅರಮನೆಯಲ್ಲೇ ಉಳಿಸಿಕೊಳ್ಳಲಾಯಿತು. ಇದು ದೇವನ ಮಹಿಮೆ ಅಲ್ಲವೆ? ಮೂಸಾ(ಅ) ಶತ್ರುವಿನ ಮನೆಯಲ್ಲಿ ಬೆಳೆದರು. ಅವರು ದೊಡ್ಡವರಾದಾಗ ಅಲ್ಲಾಹನು ಅವರನ್ನು ತನ್ನ ಪ್ರವಾದಿಯನ್ನಾಗಿ ಮಾಡಿದನು ಮತ್ತು ಈಜಿಪ್ಟ್‌ನ ಜನರು ಅಲ್ಲಾಹನನ್ನು ಮಾತ್ರ ಆರಾಧಿಸಬೇಕೆಂದು ಬೋಧಿಸುವ ಕಾರ್ಯವನ್ನು ಅವರಿಗೆ ಒಪ್ಪಿಸಿದನು. ಇದನ್ನು ಕಂಡ ಫಿರ್‌ಔನನು ಎದುರಾಳಿಯಾಗಿ ಬಂದನು. ಅಲ್ಲಾಹನು ಅವನನ್ನು ಮತ್ತು ಅವನ ಸೈನ್ಯವನ್ನು ನದಿಯಲ್ಲಿ ಮುಳುಗಿಸಿ ಬಿಟ್ಟನು. ಹೀಗೆ ಬನೀ ಇಸ್ರಾಈಲರು ತಮ್ಮ ಶತ್ರುವಿನಿಂದ ಮುಕ್ತಿ ಪಡೆದರು.

❖ ❖ ❖ ❖

# ಪ್ರವಾದಿ ಸುಲೈಮಾನ್(ಅ)ರ ಬಾಲ್ಯ

ಪ್ರವಾದಿ ಸುಲೈಮಾನ್(ಅ) ಅಲ್ಲಾಹನ ಪ್ರವಾದಿಯಾಗಿದ್ದರು. ಅವರ ತಂದೆ ಹ. ದಾವೂದ್‌ಎಅಐ ಸಹ ಅಲ್ಲಾಹನ ಪ್ರವಾದಿಯಾಗಿದ್ದರು. ಅಲ್ಲಾಹನು ಇಬ್ಬರನ್ನೂ ಪ್ರವಾದಿಗಳನ್ನಾಗಿ ಮಾಡಿದನಲ್ಲದೆ ಒಂದು ದೊಡ್ಡ ಸಾಮ್ರಾಜ್ಯವನ್ನೂ ನೀಡಿದನು ಸುಲೈಮಾನರ(ಅ) ಮೇಲೆ ಅಲ್ಲಾಹನ ವಿಶೇಷ ಅನುಗ್ರಹವಿದ್ದುದರಿಂದ ಅವರು ಪಶು ಪಕ್ಷಿಗಳ ಭಾಷೆಯನ್ನು ಅರಿತು ಕೊಳ್ಳುತ್ತಿದ್ದರು. ಅಲ್ಲಾಹನು ಜಿನ್ನ್‌ಗಳನ್ನು ಮತ್ತು ಗಾಳಿಯನ್ನು ಸುಲೈಮಾನರ(ಅ) ನಿಯಂತ್ರಣದಲ್ಲಿ ಕೊಟ್ಟಿದ್ದನು.

ಸುಲೈಮಾನರು(ಅ) ಚಿಕ್ಕವರಾಗಿದ್ದಾಗ ಅವರ ತಾಯಿಯು ಅವರಿಗೆ ಹಿತೋಪದೇಶಗಳನ್ನು ಮಾಡುತ್ತಿದ್ದಳು. ನಮಾಝ್ ಮಾಡಲು ಮಗುವಿಗೆ ತಾಕೀತು ಮಾಡುತ್ತಿದ್ದಳು. ಪ್ರವಾದಿ ಮುಹಮ್ಮದ್‌ರವರು(ಸ) ಹೇಳಿದಂತೆ, "ರಾತ್ರಿ ಇಡೀ ಮಲಗಿಕೊಳ್ಳಬೇಡ ಮಗೂ. ರಾತ್ರಿಯ ಬಹುಭಾಗ ನಿದ್ರೆಯಲ್ಲಿ ಕಳೆಯುವುದು ಮನುಷ್ಯನನ್ನು ನಿರ್ಣಾಯಕ ದಿನದಂದು ಸತ್ಕರ್ಮಗಳಿಗಾಗಿ ಪರದಾಡುವಂತಹ ಪರಿಸ್ಥಿತಿ ಉಂಟು ಮಾಡುತ್ತದೆ" ಎಂದು ಸುಲೈಮಾನರ(ಅ) ತಾಯಿ ಅವರಿಗೆ ಉಪದೇಶಿಸಿದ್ದರು.

ಸುಲೈಮಾನರು(ಅ) ಎಲ್ಲ ಉಪದೇಶಗಳನ್ನು ಗಮನಕೊಟ್ಟು ಕೇಳುತ್ತಿದ್ದರು ಕಲಿಸಲಾದ ಎಲ್ಲವನ್ನೂ ಅವರು ಮಾಡುತ್ತಿದ್ದರು. ಅಲ್ಲಾಹನು ಅವರಿಗೆ ಬಹಳ ತಿಳುವಳಿಕೆ ನೀಡಿದ್ದನು. ಅವರ ಬಾಲ್ಯದ ಕೆಲವು ಮಾತುಗಳು ಬಹಳ ಪ್ರಸಿದ್ಧವಾಗಿವೆ. ಅವುಗಳಿಂದ ಅವರು ಎಷ್ಟು ಬುದ್ಧಿವಂತರಾಗಿದ್ದರೆಂದು ನಮಗೆ ತಿಳಿಯುತ್ತದೆ

1. ಒಂದು ಸಲ ದಾವೂದ್‌ರ(ಅ) ನ್ಯಾಯಾಲಯದಲ್ಲಿ ಒಂದು ಮೊಕದ್ದಮೆ ಪ್ರಸ್ತುತಪಡಿಸಲಾಯಿತು. ಸುಲೈಮಾನರು(ಅ) ಅಲ್ಲಿ ಕುಳಿತಿದ್ದರು. ಆಗ ಅವರ ವಯಸ್ಸು ಕೇವಲ ಹನ್ನೊಂದು ವರ್ಷ ಮಾತ್ರ. ಮೊಕದ್ದಮೆ ಏನಾಗಿತ್ತೆಂದರೆ, ತನ್ನ ಹೊಲದಲ್ಲಿ ಮೇಕೆಗಳನ್ನು ಮೇಯಿಸಿ ಹೊಲವೆಲ್ಲ ನಾಶ ಮಾಡಿದನೆಂದು ಒಬ್ಬನು

ಇನ್ನೊಬ್ಬನ ಮೇಲೆ ದಾವೆ ಹೂಡಿದ್ದನು. ಒಬ್ಬನ ಮೇಕೆಗಳಿಗೆ ಸಮಾನವಾಗಿಯೇ ಇನ್ನೊಬ್ಬನ ಹೊಲದಲ್ಲಿಯೂ ಹಾನಿಯಾಗಿತ್ತು.

ದಾವೂದ್‌ರವರು(ಅ) ಬೆಳೆ ನಾಶದಿಂದಾದ ಹಾನಿಯನ್ನು ಭರಿಸಲು ಆ ಎಲ್ಲ ಮೇಕೆಗಳನ್ನು ಹೊಲದ ಮಾಲಿಕನಿಗೆ ನೀಡಬೇಕೆಂದು ತೀರ್ಪು ನೀಡಿದರು.

ಸುಲೈಮಾನರು ಮೊಕದ್ದಮೆಯನ್ನು ನೋಡುತ್ತಾ ಕುಳಿತು ಕೊಂಡಿದ್ದರು. ತೀರ್ಪನ್ನು ಆಲಿಸುತ್ತಿದ್ದ ಅವರು, "ಅಪ್ಪಾ! ನಿಮ್ಮ ತೀರ್ಪು ಸರಿಯಾಗಿಯೇ ಇದೆ. ಹೊಲದವನಿಗಾದ ಹಾನಿಯ ಪರಿಹಾರ ಅವನಿಗೆ ಅವಶ್ಯ ಸಿಗಬೇಕು. ಆದರೆ ನನ್ನ ಮನಸ್ಸಿಗೆ ಇದಕ್ಕಿಂತಲೂ ಒಂದು ಒಳ್ಳೆಯ ಉಪಾಯ ಹೊಳೆಯುತ್ತಲಿದೆ" ಎಂದರು.

ದಾವೂದ್ ಕೇಳಿದರು, "ಅದು ಯಾವ ಉಪಾಯ?" ಅವರು ಹೇಳಿದರು, ಮೇಕೆಗಳ ಹಿಂಡನ್ನು ಹೊಲದ ಮಾಲಿಕನಿಗೆ ನೀಡಬೇಕು ಮತ್ತು ಅವನು ಅವುಗಳ ಹಾಲು ಕರೆದು, ಅವುಗಳ ಲಾಭವನ್ನು ಪಡೆಯಲಿ ಮತ್ತು ಮೇಕೆಗಳ ಮಾಲಿಕನು ಆ ಹೊಲದಲ್ಲಿ ಮತ್ತೆ ಬಿತ್ತನೆ ಮಾಡಿ ಬೆಳೆಯೊಂದಿಗೆ ಆ ಹೊಲವನ್ನು ಅದರ ಮಾಲಿಕನಿಗೆ ಮರಳಿಸಿ ತನ್ನ ಮೇಕೆಗಳನ್ನು ವಾಪಸು ಪಡೆಯಲಿ." ದಾವೂದ್‌ರಿಗೆ(ಅ) ಈ ತೀರ್ಪು ಬಹಳ ಹಿಡಿಸಿತು. ಇದರಂತೆ ಅವರು ಮರು ತೀರ್ಪು ನೀಡಿದರು.

2. ಇನ್ನೊಂದು ಮೊಕದ್ದಮೆಯ ತೀರ್ಪನ್ನು ಇದಕ್ಕಿಂತ ಹೆಚ್ಚು ಬುದ್ಧಿವಂತಿಕೆಯಿಂದ ಮಾಡಿದರು. ಈ ಮೊಕದ್ದಮೆಯೂ ಅತ್ಯಂತ ರೋಚಕವಾಗಿದೆ. ಘಟನೆಯೇನಾಗಿತ್ತೆಂದರೆ ಇಬ್ಬರು ಹೆಂಗಸರು ತಮ್ಮ ಉಡಿಯಲ್ಲಿ ಒಂದೊಂದು ಮಗುವನ್ನು ಹೊತ್ತುಕೊಂಡು ಪ್ರಯಾಣಿಸುತ್ತಿದ್ದರು. ಇಬ್ಬರೂ ರಾತ್ರಿ ಕಳೆಯಲು ಒಂದು ಜಾಗದಲ್ಲಿ ತಂಗಿದರು. ಹಿರಿ ವಯಸ್ಸಿನ ಹೆಂಗಸಿನ ಮಗುವನ್ನು ತೋಳ ಎತ್ತಿಕೊಂಡು ಹೋಯಿತು. ಬೆಳಗಾದ ನಂತರ ಆಕೆ ಕಿರಿ ವಯಸ್ಸಿನವಳ ಮಗುವನ್ನು ಕಸಿದು ಕೊಂಡು ಈ ಮಗು ನನ್ನದೆಂದು ವಾದಿಸಿದಳು. ಇಬ್ಬರೂ ಆ ಮಗುವಿಗಾಗಿ ಜಗಳಾಡ ತೊಡಗಿದರು. ಮೊಕದ್ದಮೆ ದಾವೂದರ(ಅ) ನ್ಯಾಯಾಲಯಕ್ಕೆ ಮುಟ್ಟಿತು. ಅಲ್ಲಿ ಹಿರಿವಯಸ್ಸಿನ ಹೆಂಗಸು ಚಾಣಾಕ್ಷತನದಿಂದ ಮಾತಾಡಿ ದಾವೂದರಿಂದ(ಅ) ಆ ಮಗುವನ್ನು ಪಡೆದಳು. ಕಿರಿ ವಯಸ್ಸಿನ ಹೆಂಗಸು ರೋದಿಸುತ್ತಾ ನ್ಯಾಯಾಲಯದಿಂದ ಹೊರಕ್ಕೆ ಬಂದಳು. ದಾರಿ ಮಧ್ಯೆ ಸುಲೈಮಾನರ(ಅ) ಭೇಟಿಯಾಯಿತು. ಅವರು ನಡೆದ ಘಟನೆಯನ್ನು ತಿಳಿದುಕೊಂಡರು. ಸುಲೈಮಾನರು ಇಬ್ಬರು ಹೆಂಗಸರನ್ನೂ ಕರೆದರು, ಮಗುವನ್ನು ತನ್ನ ಕೈಯಲ್ಲಿ ತೆಗೆದುಕೊಂಡರು. "ಈ ಮಗುವನ್ನು ಎರಡು ತುಂಡು ಮಾಡಿ ಇವರಿಬ್ಬರಲ್ಲಿ ಹಂಚಿರಿ" ಎಂದು ಆದೇಶಿಸಿದರು.

ಈ ಆದೇಶ ಕೇಳಿದ ಕಿರಿ ವಯಸ್ಸಿನ ಹೆಂಗಸು ಮತ್ತಷ್ಟು ಅಳಲ
ಆರಂಭಿಸಿದಳು. “ಆದರಣೀಯರೇ! ಮಗುವನ್ನು ತುಂಡರಿಸಬೇಡಿ. ಆಕೆಯ
ಬಳಿಯಲ್ಲೇ ಇರಲು ಕೊಡಿ. ನನ್ನ ಮಗು ನನ್ನ ಬಳಿ ಇರದಿದ್ದರೂ ಆಕೆಯ
ಬಳಿ ಜೀವಂತವಾಗಿದ್ದರೆ ಸಾಕು, ತುಂಡರಿಸಿದರೆ ಅದು ಸಾಯುವುದು” ಎಂದ
ಆಕೆ ಹೇಳಿದಳು. ಇದನ್ನು ಆಲಿಸಿದ ಸುಲೈಮಾನ್(ಅ) ಈ ಮಗು ಕಿರಿ ವಯಸ್ಸಿ
ಹೆಂಗಸಿನದ್ದಾಗಿದೆ ಎಂದು ಹೇಳಿದರು. ಮತ್ತೆ ಆದದ್ದೆಲ್ಲವನ್ನು ದಾವೂದ್‌ರಿಗೆ(ಅ
ತಿಳಿಸಿದರು. ದಾವೂದ್‌ರವರು(ಅ) ಈಗ ತಿಳಿದುಕೊಂಡರು, ಅವರು ಹಿರಿ ವಯಸ್ಸಿ
ಹೆಂಗಸಿಗೆ ಶಿಕ್ಷೆ ನೀಡಿದರು. ಹೀಗೆ ಕಿರಿ ವಯಸ್ಸಿನವಳಿಗೆ ಆಕೆಯ ಮಗು ಸಿಕ್ಕಿತು

# ಪ್ರವಾದಿ ಮುಹಮ್ಮದ್(ಸ)ರ ಬಾಲ್ಯ

ಪ್ರವಾದಿ ಮುಹಮ್ಮದ್‌ರು(ಸ) ಸಣ್ಣ ವಯಸ್ಸಿನವರಾಗಿದ್ದಾಗ ಒಬ್ಬ ಹುಡುಗನು ವರಿಗೆ ಹೇಳಿದನು, "ನಿನಗೆ ಗೊತ್ತೇ! ಊರಲ್ಲಿ ಜಾತ್ರೆ ನಡೆಯುತ್ತದೆ. ರಾತ್ರಿಯ ಹೊತ್ತು ಜನರು ಮಜಾ ಉಡಾಯಿಸುತ್ತಾರೆ, ಕುಣಿಯುತ್ತಾರೆ, ಕುಣಿಯುವುದನ್ನು ೋಡುತ್ತಾರೆ, ಕೆಲವರು ಹಾಡುತ್ತಾರೆ, ಹಾಡುವುದನ್ನು ಕೇಳುತ್ತಾರೆ, ಇನ್ನು ಕೆಲವರು ಥೆ ಹೇಳುತ್ತಾರೆ, ಕೇಳುತ್ತಾರೆ, ಅಲ್ಲದೆ ಇನ್ನೂ ನಾನಾ ತರದ ಮನೋರಂಜನೆಯ ಾರ್ಯಗಳನ್ನು ಮಾಡುತ್ತಾರೆ."

ಇದನ್ನು ಕೇಳಿದ ಪ್ರವಾದಿಯವರಿಗೆ(ಸ) ರಾತ್ರಿ ಇಡೀ ಜಾಗರಣೆ ಮಾಡಿ ಈ ನೋರಂಜನೆಯ ಕಾರ್ಯಕ್ರಮವನ್ನು ನೋಡಬೇಕೆಂಬ ಆಸಕ್ತಿಯುಂಟಾಯಿತು. ಪ್ರವಾದಿವರ್ಯರು(ಸ) ಒಂದು ರಾತ್ರಿ ಅಲ್ಲಿಗೆ ನಡೆದರು. ಆದರೆ ಅಲ್ಲಾಹನು ತನ್ನ ಪ್ರವಾದಿಯನ್ನು ಇಂತಹ ಆಟ ವಿನೋದಗಳಲ್ಲಿ ತೊಡಗಿಸುವುದನ್ನು ಬಯಸಿರಲಿಲ್ಲ. ಪ್ರವಾದಿಯವರು(ಸ) ಬಾಲ್ಯದಲ್ಲಿಯೂ ಪರಿಶುದ್ಧರಾಗಿರಬೇಕು ಮತ್ತು ಸದ್ಗುಣಿ ಯಾಗಿರಬೇಕೆಂದು ಅಲ್ಲಾಹನು ಬಯಸಿದ್ದನು. ಆದ್ದರಿಂದ ಪ್ರವಾದಿ ವರ್ಯರು(ಸ) ತ್ತ ನಡೆದುಕೊಂಡು ಹೋಗುವಾಗ ಯಾವುದೋ ಕೆಲಸಕ್ಕಾಗಿ ದಾರಿ ನಡುವೆ ಸ್ವಲ್ಪ ಹೊತ್ತು ತಂಗಿದರು. ಅಲ್ಲಿಯೇ ಬೆಳಗಿನ ತನಕ ನಿದ್ರಿಸಿದರು.

ಪ್ರವಾದಿ ಮುಹಮ್ಮದರು(ಸ) ಬಾಲ್ಯದಲ್ಲಿ ಬಹಳ ಲಜ್ಜಾವಂತರಾಗಿದ್ದರು. ಒಂದು ಲ ಕಅಬಾ ಮಸೀದಿಯ ಗೋಡೆ ಜರಿದು ಬಿತ್ತು. ಮಕ್ಕಾದ ಜನರೆಲ್ಲರೂ ಅದನ್ನು ತ್ತಿ ಕಟ್ಟಲಾರಂಭಿಸಿದರು. ಮುದುಕರು, ಮಕ್ಕಳು, ಯುವಕರೆಲ್ಲರೂ ಈ ಕಾರ್ಯದಲ್ಲಿ ೊಡಗಿದರು. ಕೆಲವು ಜನರು ಗುಡ್ಡದಿಂದ ಕಲ್ಲುಗಳನ್ನು ತರುತ್ತಿದ್ದರು, ಕೆಲವರು ವುಗಳನ್ನು ಕಡಿಯುತ್ತಿದ್ದರು, ಕೆಲವರು ಗೋಡೆಯನ್ನು ಕಟ್ಟುತ್ತಿದ್ದರು. ಹುಡುಗರು ಲ್ಲುಗಳನ್ನು ಹೊತ್ತುಕೊಂಡು ತರುತ್ತಿದ್ದರು. ಆಗ ಪ್ರವಾದಿವರ್ಯರ(ಸ) ವಯಸ್ಸು ೇವಲ ಎಂಟು ವರ್ಷವಾಗಿತ್ತು. ಅವರೂ ಸಹ ಕಲ್ಲು ತರುವ ಕೆಲಸ ಮಾಡುತ್ತಿದ್ದರು.

ಅವರು ಗುಡ್ಡದ ಕಡೆಗೆ ಹೋಗಿ ದೊಡ್ಡದಾದ ಕಲ್ಲನ್ನು ತನ್ನ ಹೆಗಲ ಮೇಲೆ ಎತ್ತಿಕೊಂಡು ತಂದು ಕಅಬಾದ ಬಳಿ ಇಡುತ್ತಿದ್ದರು. ಮತ್ತೆ ಓಡೋಡಿ ಹೋಗುತ್ತಿದ್ದರು, ಪುನಃ ಕಲ್ಲು ಎತ್ತಿಕೊಂಡು ತರುತ್ತಿದ್ದರು. ಹೀಗೆ ಮೇಲಿಂದ ಮೇಲೆ ಕಲ್ಲುಗಳನ್ನು ಹೆಗಲ ಮೇಲೆ ಎತ್ತಿಕೊಂಡು ತರುತ್ತಿದ್ದುದರಿಂದ ಪ್ರವಾದಿವರ್ಯರ(ಸ) ಹೆಗಲು ಗಾಯಗೊಂಡಿತ್ತು.

ಪ್ರವಾದಿಯವರ(ಸ) ಜೊತೆಯಲ್ಲಿ ಅವರ ಚಿಕ್ಕಪ್ಪ ಅಬ್ಬಾಸ್ ಕೂಡಾ ಕಲ್ಲು ತರುತ್ತಿದ್ದರು. ಅವರು ವಯಸ್ಸಿನಲ್ಲಿ ಪ್ರವಾದಿಯವರಿಗಿಂತ(ಸ) ಸ್ವಲ್ಪ ದೊಡ್ಡವರಾಗಿದ್ದರು. ಪ್ರವಾದಿಯವರನ್ನು(ಸ) ಬಹಳ ಪ್ರೀತಿಯಿಂದ ಕಾಣುತ್ತಿದ್ದರು. ಅಬ್ಬಾಸರು ಪ್ರವಾದಿವರ್ಯರ(ಸ) ಹೆಗಲಿನ ಗಾಯವನ್ನು ನೋಡಿದಾಗ ಅವರ ಹತ್ತಿರ ಬಂದರು, ಅವರ ಪಂಚೆಯನ್ನು ಬಿಚ್ಚಿದರು ಮತ್ತು ಅದನ್ನು ಮಡಚಿ, ಪ್ರವಾದಿವರ್ಯರ(ಸ) ಹೆಗಲಿನ ಮೇಲೆ ಇಟ್ಟರು. ಚಿಕ್ಕಪ್ಪ ಅಬ್ಬಾಸ್‌ರ(ರ) ಉದ್ದೇಶ ಕಲ್ಲು ತರುವಾಗ ಭುಜದ ಮೇಲೆ ಗಾಯವಾಗ ಬಾರದೆಂಬುದಾಗಿತ್ತು.

ಪಂಚೆ ಬಿಚ್ಚಿದಾಗ ಪ್ರವಾದಿವರ್ಯರು(ಸ) ಲಜ್ಜೆಯಿಂದ ಮುದುಡಿದರು. ಅವರು ಪ್ರಜ್ಞಾಹೀನರಾಗಿ ಬಿದ್ದುಬಿಟ್ಟರು. ಜನರು ಓಡಿ ಬಂದರು, ಪ್ರಜ್ಞೆ ಮರಳಿ ಬರುವಂತೆ ಶುಶ್ರೂಷೆ ಮಾಡ ತೊಡಗಿದರು. ಸ್ವಲ್ಪ ಪ್ರಜ್ಞೆ ಬಂದಾಗ, ಪ್ರವಾದಿವರ್ಯರು(ಸ) "ನನ್ನ ಪಂಚೆ, ನನ್ನ ಪಂಚೆ" ಎಂದು ಹೇಳುತ್ತಿದ್ದರು. ಈಗ ಜನರಿಗೆ ಅರ್ಥವಾಯಿತು. ಅವರು ಪಂಚೆಯನ್ನು ಮತ್ತೆ ತೊಡಿಸಿದರು. ಆಗ ಪ್ರವಾದಿವರ್ಯರು(ಸ) ಚೇತರಿಸಿಕೊಂಡರು.

# ಹ. ಅಬೂಬಕರ್(ರ)ರ ಬಾಲ್ಯ

ಅಬೂಬಕರ್ ಸಿದ್ದೀಕ್‌ರವರು(ರ) ಪ್ರವಾದಿ ಮುಹಮ್ಮದ್‌ರ(ಸ) ಪ್ರೀತಿಯ ಸಂಗಾತಿಯಾಗಿದ್ದರು. ಅವರು ಪ್ರವಾದಿವರ್ಯರನ್ನು(ಸ) ಬಹಳ ಪ್ರೀತಿಸುತ್ತಿದ್ದರು, ಅದರಂತೆ ಪ್ರವಾದಿವರ್ಯರು(ಸ) ಸಹ ಅಬೂಬಕರ್‌ರನ್ನು ಬಹಳ ಪ್ರೀತಿಯಿಂದ ಕಾಣುತ್ತಿದ್ದರು. ಪ್ರವಾದಿವರ್ಯರಎಸಏ ಸಂಗಾತಿಗಳಲ್ಲಿ ಇವರು ಅತ್ಯಂತ ಹಿರಿಯರು ಹಾಗೂ ಆದರಣೀಯ ಸಂಗಾತಿಯಾಗಿದ್ದರು. ಪ್ರವಾದಿವರ್ಯರ(ಸ) ನಂತರ ಮುಸ್ಲಿಮರೆಲ್ಲರೂ ಅಬೂಬಕರ್‌ರನ್ನು(ರ) ತಮ್ಮ ಖಲೀಫ(ಆಡಳಿತಗಾಂ) ಆಗಿ ಆರಿಸಿದರು. ಅಬೂಬಕರ್‌ರವರು(ರ) ಬಹಳ ಪ್ರಾಮಾಣಿಕವಾಗಿ ಇಸ್ಲಾಮೀ ಆಡಳಿತವನ್ನು ನಡೆಸಿದರು. ಅವರ ಬಾಲ್ಯದ ಒಂದು ಘಟನೆ ಮಾತ್ರ ಗ್ರಂಥಗಳಲ್ಲಿ ಲಭ್ಯವಿದೆ.

ಅಬೂಬಕರ್ ಸಿದ್ದೀಕ್‌ರು(ರ) ಹೀಗೆ ಹೇಳುತ್ತಿದ್ದರು "ನಾನು ಇನ್ನೂ ಸಣ್ಣ ಬಾಲಕನಾಗಿದ್ದಾಗ ಒಂದು ಸಲ ನನ್ನ ತಂದೆ ಅಬೂ ಕುಹಾಫ ನನ್ನ ಕೈ ಹಿಡಿದು ಒಂದು ಕೋಣೆಗೆ ಕರೆದುಕೊಂಡು ಹೋದರು. ಅದರಲ್ಲಿ ವಿಗ್ರಹಗಳಿದ್ದವು. ಒಂದು ವಿಗ್ರಹವನ್ನು ತೋರಿಸುತ್ತಾ, 'ಇದು ನಿನ್ನ ಆರಾಧ್ಯ (ದೇವ), ಇದಕ್ಕೆ ಸಾಷ್ಟಾಂಗವೆರಗು' ಎಂದು ಹೇಳಿ, ಅವರು ನನ್ನನ್ನು ಅಲ್ಲಿಯೇ ಬಿಟ್ಟು ಹೊರಟು ಹೋದರು. ನಾನು ಆ ವಿಗ್ರಹದ ಹತ್ತಿರ ಹೋಗಿ ಹೀಗೆಂದೆನು, 'ನಾನು ನಗ್ನನಾಗಿದ್ದೇನೆ. ನನಗೆ ಬಟ್ಟೆ ತೊಡಿಸು' ಆದರೆ ಅದು ಉತ್ತರಿಸಲಿಲ್ಲ. ನಾನು ಮತ್ತೆ ಹೇಳಿದೆ, 'ನನಗೆ ಹಸಿವೆಯಾಗಿದೆ, ಅನ್ನ ನೀಡು.' ಆಗಲೂ ಅದು ಉತ್ತರಿಸಲಿಲ್ಲ. ನಾನು ಒಂದು ಕಲ್ಲನ್ನು ತೆಗೆದುಕೊಂಡು ಹೇಳಿದೆ, 'ನಾನು ನಿನ್ನನ್ನು ಇದರಿಂದ ಹೊಡೆಯುತ್ತೇನೆ, ನೀನು ದೇವರೆಂದಾದರೆ ನಿನ್ನನ್ನು ರಕ್ಷಿಸಿಕೋ.' ಅದು ಏನೇನೂ ಉತ್ತರಿಸಲಿಲ್ಲ. ನಾನು ಅದಕ್ಕೆ ಒಂದು ಕಲ್ಲನ್ನು ಎಸೆದೆ ಮತ್ತು ಅದು ಕೆಳಮುಖವಾಗಿ ಬಿದ್ದಿತು."

❖ ❖ ❖ ❖

# ಹ. ಅಲಿಯವರ(ರ) ಬಾಲ್ಯ

ಹ. ಅಲೀಎರಏ ಪ್ರವಾದಿ ಮುಹಮ್ಮದ್‌ರ(ಸ) ಸೋದರ ಪುತ್ರ ಹಾಗೂ ಪ್ರೀತಿಯ ಅಳಿಯನಾಗಿದ್ದರು. ಬಾಲ್ಯದಿಂದಲೇ ಬಹಳ ಬುದ್ಧಿವಂತರು ಹಾಗೂ ವೀರರಾಗಿದ್ದರು. ಅಲೀ(ರ) ಇನ್ನೂ ಚಿಕ್ಕವಯಸ್ಸಿನವರಿದ್ದಾಗಲೇ ಪ್ರವಾದಿ ಮುಹಮ್ಮದ್‌ರನ್ನು(ಸ) ಅಲ್ಲಾಹನು ತನ್ನ ಸಂದೇಶವಾಹಕರನ್ನಾಗಿ ಮಾಡಿದನು. ಪ್ರವಾದಿ ವರ್ಯರು(ಸ) ಜನರಿಗೆ ಅಲ್ಲಾಹನ ಸಂದೇಶವನ್ನು ತಲುಪಿಸಲು ಆರಂಭಿಸಿದಾಗ ಐದು ಜನ ಮಹನೀಯರು ಪ್ರವಾದಿವರ್ಯರ(ಸ) ಮೇಲೆ ವಿಶ್ವಾಸ ತಂದರು, ಅವರಲ್ಲಿ ಹ. ಅಲೀಯವರೂ ಒಬ್ಬರಾಗಿದ್ದರು. ಆಗ ಇವರ ವಯಸ್ಸು ಕೇವಲ ಹನ್ನೆರಡು ವರ್ಷವಾಗಿತ್ತು.

ಪ್ರವಾದಿಯನ್ನಾಗಿ ನೇಮಿಸಲ್ಪಟ್ಟ ಕೆಲವು ದಿನಗಳ ನಂತರ ಪ್ರವಾದಿವರ್ಯರು(ಸ) ಅಲೀಯವರಲ್ಲಿ ಒಂದು ಔತಣ ಕೂಟವನ್ನು ಏರ್ಪಡಿಸಲು ಹೇಳಿದರು.

ಅಲೀ(ರ) ಅದರ ವ್ಯವಸ್ಥೆ ಮಾಡಿದರು. ಈ ಕೂಟದಲ್ಲಿ ಪ್ರವಾದಿವರ್ಯರ(ಸ) ಮನೆತನದ ಎಲ್ಲ ಗಣ್ಯರು ಉಪಸ್ಥಿತರಿದ್ದರು. ಚಿಕ್ಕಪ್ಪಂದಿರಾದ ಅಬೂಲಹಬ್, ಹ. ಅಬ್ಬಾಸ್ ಮತ್ತು ಹ. ಹಂಝಾ ಕೂಡಾ ಇದ್ದರು. ಎಲ್ಲರೂ ಊಟ ಮಾಡಿದ ನಂತರ ಪ್ರವಾದಿವರ್ಯರು(ಸ) ಒಂದು ಭಾಷಣ ಮಾಡಿದರು. ಈ ಭಾಷಣದಲ್ಲಿ ಹೀಗೆ ಹೇಳಿದರು, "ನಾನು ನಿಮಗೆ ಇಹಪರದಲ್ಲಿ ಯಶಸ್ಸು ತಂದು ಕೊಡುವ ಒಂದು ಸಂದೇಶವನ್ನು ತಂದಿದ್ದೇನೆ, ನನ್ನ ಈ ಕಾರ್ಯದಲ್ಲಿ ನನಗೆ ಯಾರು ಸಹಾಯ ಮಾಡುವರು?"

ಪ್ರವಾದಿವರ್ಯರ(ಸ) ಈ ಭಾಷಣವನ್ನು ಆಲಿಸಿದ ಜನರು ಏನೇನೂ ಹೇಳಲಿಲ್ಲ. ಸಭೆಯಲ್ಲಿ ಮೌನ ಆವರಿಸಿತು. ಈ ವೇಳೆ ಅಲೀಯವರು 12 ವರ್ಷದವರಾಗಿದ್ದರು. ಅವರು ಅಷ್ಟೊಂದು ಎತ್ತರವೂ ಇರಲಿಲ್ಲ. ಕೈಕಾಲುಗಳು ಅಷ್ಟು ಶಕ್ತಿಶಾಲಿಯಾಗಿರಲಿಲ್ಲ ದೇಹವು ಸಣಕಲಾಗಿತ್ತು. ಕಣ್ಣುಗಳಲ್ಲಿ ಬೇನೆಯಿತ್ತು. ಆದರೆ,

ಆ ಸಮಯದಲ್ಲಿಯೂ ಅವರು ಪರಾಕ್ರಮಿ ಮತ್ತು ಭಾವುಕರಾಗಿದ್ದರು. ಪ್ರವಾದಿಯವರ(ಸ) ಭಾಷಣ ಕೇಳಿ, ತನ್ನ ಆವೇಶವನ್ನು ಬಚ್ಚಿಡಲಿಲ್ಲ. ದೊಡ್ಡ ದೊಡ್ಡ ವ್ಯಕ್ತಿಗಳ ಮುಂದೆ ಪ್ರವಾದಿವರ್ಯರನ್ನುಎಸಏ ಸಂಬೋಧಿಸುತ್ತಾ ಅವರು ಹೇಳಿದರು, "ನನ್ನ ಕಣ್ಣುಗಳಲ್ಲಿ ಬೇನೆಯಿದೆ, ನನ್ನ ಕೈ ಕಾಲುಗಳಲ್ಲಿ ಶಕ್ತಿಯಿಲ್ಲ ಮತ್ತು ನಾನು ಇನ್ನೂ ಬಾಲಕನಾಗಿದ್ದೇನೆ, ಆದರೂ ಓ ಪ್ರವಾದಿವರ್ಯರೆ! ನಾನು ನಿಮ್ಮ ಸಹಾಯಕ್ಕೆ ಇರುವೆನು."

ಅಲೀಯವರ(ರ) ಈ ಮಾತನ್ನು ಕೇಳಿದ ಜನರೆಲ್ಲರೂ, ಅವರ ಮುಖವನ್ನು ಪಿಳಿ ಪಿಳಿ ನೋಡ ತೊಡಗಿದರು. ಈ ಹುಡುಗ ಪ್ರವಾದಿ ಮುಹಮ್ಮದ್‌ರ(ಸ) ಮಾತುಗಳನ್ನು ತಿಳಿದಿದ್ದಾನೋ ಅಥವಾ ಆವೇಶದಲ್ಲಿ ಹೇಳುತ್ತಿದ್ದಾನೋ ಎಂದು ಅವರು ಹೇಳತೊಡಗಿದರು.

ಆದರೆ, ಮುಂದೆ ಈ ಬಾಲಕ ಯಾವ ರೀತಿಯಾಗಿ ಇಸ್ಲಾಮಿಗಾಗಿ ತನ್ನ ಸರ್ವಸ್ವವನ್ನೇ ಅರ್ಪಿಸಿದರು ಮತ್ತು ಈ ಬಲಿದಾನದಿಂದ ಅವರು ಅಲ್ಲಾಹ್ ಮತ್ತು ಆತನ ಪ್ರವಾದಿಯ ನಾಮವನ್ನು ಹೇಗೆ ಉತ್ತುಂಗಕ್ಕೆ ಏರಿಸಿದರು, ಇಸ್ಲಾಮಿನ ಶ್ರೇಯೋಭಿವೃದ್ಧಿಯನ್ನು ಹೇಗೆ ಮಾಡಿದರು ಎಂಬುದನ್ನು ಜಗತ್ತು ಕಂಡಿತು. ಅಲ್ಲಾಹನು ಅವರನ್ನು ಕರುಣಿಸಲಿ.

# ಹ. ಝೈದ್ ಬಿನ್ ಹಾರಿಸ(ರ)ರ ಬಾಲ್ಯ

ಮನುಷ್ಯನ ಮೇಲೆ ಯಾವುದೇ ವಿಪತ್ತು ಬಂದಾಗ ಅವನು ಬಹಳ ಗಾಬರಿಗೊಳ್ಳುತ್ತಾನೆ. ಆದರೆ ಕೆಲವೊಮ್ಮೆ ಇದೇ ವಿಪತ್ತು ಅವನನ್ನು ಅತ್ಯುನ್ನತ ಮಟ್ಟಕ್ಕೆ ಕೊಂಡೊಯ್ಯುತ್ತದೆ. ಪ್ರವಾದಿ ಯೂಸುಫ್‌ರನ್ನು(ಅ) ಅವರ ಅಣ್ಣಂದಿರು ಬಾವಿಗೆ ತಳ್ಳಿದರು. ಹ. ಯೂಸುಫ್‌ರನ್ನು(ಅ) ಕೊಂದು ಹಾಕಿದೆವೆಂದು ಅವರು ಭಾವಿಸಿದರು. ಆದರೆ, ದೇವನು ತನ್ನ ಮಹಿಮೆಯಿಂದ ಅವರನ್ನು ಬಾವಿಯಿಂದ ಹೊರ ತೆಗೆದು ಈಜಿಪ್ಟ್‌ಗೆ ಮುಟ್ಟಿಸಿದನು. ಅಲ್ಲಿ ಅವರು ಗುಲಾಮರಂತೆ ಮಾರಲ್ಪಟ್ಟರು. ಕೊನೆಗೆ ಈಜಿಪ್ಟ್‌ನ ಆಡಳಿತಗಾರರಾದರು.

ಇದೇ ರೀತಿಯ ಪರಿಸ್ಥಿತಿ ಹ. ಝೈದ್ ಬಿನ್ ಹಾರಿಸ(ರ) ಅವರದ್ದೂ ಆಗಿತ್ತು. ಅಲ್ಲಾಹನ ಮಹಿಮೆ ಮತ್ತು ಅವನ ಯುಕ್ತಿಯನ್ನು ಯಾರೂ ಬಲ್ಲವರಿಲ್ಲ.

ಝೈದ್ ತನ್ನ ತಾಯಿಯೊಂದಿಗೆ ತನ್ನ ಅಜ್ಜಿಯ ಊರಿಗೆ ಹೋಗುತ್ತಿದ್ದರು. ಆಗ ಅವರ ವಯಸ್ಸು 7–8 ವರ್ಷವಾಗಿತ್ತು. ದಾರಿ ಮಧ್ಯದಲ್ಲಿ ದರೋಡೆಕೋರರು ಆಕ್ರಮಣ ಮಾಡಿ ಝೈದ್‌ರನ್ನು ಅವರ ತಾಯಿಯಿಂದ ಕಸಿದುಕೊಂಡು ಹೋದರು ಮತ್ತು ಗುಲಾಮನನ್ನಾಗಿ ಮಾಡಿ ಉಕಾಝ್ ಪೇಟೆಯಲ್ಲಿ ಅವರನ್ನು ಮಾರಿದರು.

ಝೈದ್‌ರ ತಂದೆ ತಾಯಿಗಳಿಗೆ ಹಾಗೂ ಸ್ವತಃ ಅವರಿಗೆ ಇದು ಎಂತಹ ಗಂಭೀರ ಸಂಕಷ್ಟವೆಂದು ಊಹಿಸಿರಿ! ಆದರೆ, ನಂತರದ ಘಟನೆಗಳನ್ನು ಓದಿದಾಗ ಇದೇ ಸಂಕಷ್ಟ ಅವರಿಗಾಗಿ ಒಂದು ದೊಡ್ಡ ಅನುಗ್ರಹವನ್ನು ಪಡೆಯಲು ದಾರಿ ಮಾಡಿಕೊಟ್ಟಿತೆಂದು ತಿಳಿದು ಬರುತ್ತದೆ.

ನಡೆದ ಘಟನೆಯೇನೆಂದರೆ ಝೈದ್‌ರನ್ನು ಪ್ರವಾದಿ ಮುಹಮ್ಮದ್‌ರ(ಸ) ಪತ್ನಿ ಖದೀಜಾರ(ರ) ಸೋದರಳಿಯ ಹಕೀಮ್ ಬಿನ್ ಹಿಝಾಮ್ ಖರೀದಿಸಿದನು. ಬಳಿಕ ಮಕ್ಕಾ ನಗರಕ್ಕೆ ತಂದು ಖದೀಜಾರಿಗೆ ಕೊಟ್ಟನು. ಖದೀಜಾರು ಅವರನ್ನು ಪ್ರವಾದಿವರ್ಯರಿಗೆ(ಸ) ಕೊಟ್ಟರು. ಪ್ರವಾದಿವರ್ಯರ(ಸ) ಗುಲಾಮರಾಗುವುದಕ್ಕಿಂತ

ದೊಡ್ಡ ಸೌಭಾಗ್ಯ ಬೇರೇನಿತ್ತು? ದೊಡ್ಡವರಾದಾಗ ಝೈದ್‌ರವರು ಈ ದಾಸ್ಯದ ಬಗ್ಗೆ ಹೆಮ್ಮೆ ಪಡುತ್ತಿದ್ದರು. ಎಷ್ಟು ಬೆಲೆತೆತ್ತರೂ, ಪ್ರವಾದಿವರ್ಯರ(ಸ) ದಾಸ್ಯವನ್ನು ತ್ಯಜಿಸಲು ಅವರು ಸಿದ್ಧರಿರಲಿಲ್ಲ.

ಝೈದ್‌ರವರು ಪ್ರವಾದಿವರ್ಯರ(ಸ) ದಾಸ್ಯದಲ್ಲಿದ್ದರು. ಅತ್ತ ಅವರ ಊರಲ್ಲಿ ಅವರ ತಂದೆ ತಾಯಿಗಳು ತಮ್ಮ ಮಗನ ವಿಯೋಗದಿಂದ ಅತ್ಯಂತ ದುಃಖಿತಪ್ತರಾಗಿದ್ದರು. ಹಗಲು ರಾತ್ರಿ ಕಣ್ಣೀರು ಸುರಿಸುತ್ತಿದ್ದರು. ಹಾಗೆಯೇ ಅಲ್ಲಲ್ಲಿ ಹುಡುಕುತ್ತಿದ್ದರು. ಬಹಳ ದಿನಗಳು ಕಳೆದ ನಂತರ ಯಾರೋ ಅವರಿಗೆ ಅವರ ಮಗ ಮಕ್ಕಾದಲ್ಲಿ ಪ್ರವಾದಿ ಮುಹಮ್ಮದ್‌ರವರ(ಸ) ಬಳಿಯಲ್ಲಿದ್ದಾನೆಂದು ತಿಳಿಸಿದರು.

ಇದನ್ನು ಕೇಳಿದ ಝೈದ್‌ರ ತಂದೆ ಹಾರಿಸ ತನ್ನ ಸಹೋದರ ಕಅಬ್‌ರೊಂದಿಗೆ ಮಕ್ಕಾ ನಗರಕ್ಕೆ ಬಂದು ಪ್ರವಾದಿವರ್ಯರನ್ನುಎಸಅ ಭೇಟಿಯಾಗಿ ತನ್ನೆಲ್ಲ ದುಃಖ ಭರಿತ ಕಥೆಯನ್ನು ಈ ರೀತಿಯಾಗಿ ಹೇಳುತ್ತಾರೆ, "ಓ ಅಬ್ದುಲ್ಲಾರ ಪುತ್ರನೇ, ಓ ಅಬ್ದುಲ್ ಮುತ್ತಲಿಬ್‌ರ ಸುಪುತ್ರನೇ, ಓ ಕುರೈಶ್ ಸಮುದಾಯದ ಸುಪುತ್ರನೇ! ನೀವೆಲ್ಲ ಕಅಬಾದವರಾಗಿದ್ದೀರಿ. ಸಂಕಷ್ಟದಲ್ಲಿ ಸಿಲುಕಿದವರಿಗೆ ಸಹಾಯ ಮಾಡುವವರಾಗಿದ್ದೀರಿ. ನೀವು ಸೆರೆಯಾಳುಗಳಿಗೆ ತಿನ್ನಿಸುತ್ತೀರಿ. ದಯವಿಟ್ಟು ನಮ್ಮ ಮಗನನ್ನು ನಮಗೆ ದಯಪಾಲಿಸಿರಿ. ಇದರ ಬದಲಾಗಿ ನೀವು ಬಯಸಿದಷ್ಟು ಹಣ ಪಡೆಯಿರಿ. ನೀವು ಹೇಳಿದಷ್ಟು ಸಂಪತ್ತು ನೀಡಲಿಕ್ಕೆ ನಾವು ಸಿದ್ಧರಿದ್ದೇವೆಂದು ಹೇಳಲು ಬಂದಿದ್ದೇವೆ."

ಹಾರಿಸರ ಈ ಮಾತುಗಳನ್ನು ಕೇಳಿದ ಪ್ರವಾದಿವರ್ಯರು(ಸ), "ನೀವು ಯಾವ ಹುಡುಗನ ಬಗ್ಗೆ ಕೇಳುತ್ತೀರಿ?" ಎಂದು ಪ್ರಶ್ನಿಸಿದರು. ಝೈದ್‌ನ ಬಗ್ಗೆ ಎಂದು ಅವರು ಉತ್ತರಿಸಿದರು. 'ಝೈದ್‌ನ ಬಗ್ಗೆ' ಎಂದು ಕೇಳಿದ ಪ್ರವಾದಿಯವರು(ಸ) ಸ್ವಲ್ಪ ಹೊತ್ತು ಸುಮ್ಮನಾದರು. ಸತ್ಯ ಸಂಗತಿಯೇನೆಂದರೆ ಝೈದ್‌ರನ್ನು ಪ್ರವಾದಿವರ್ಯರು(ಸ) ಬಹಳ ಪ್ರೀತಿಸುತ್ತಿದ್ದರು. ಪ್ರವಾದಿವರ್ಯರು(ಸ) ಝೈದ್‌ರನ್ನು ತನ್ನ ಮಗನಂತೆ ಸಾಕುತ್ತಿದ್ದರು. ಅಲ್ಲದೆ ಝೈದ್‌ರು ಆಜ್ಞಾಪಾಲಕನಾಗಿ ಪ್ರವಾದಿವರ್ಯರ(ಸ) ಬಳಿ ಇರುತ್ತಿದ್ದರು. ಮತ್ತೊಬ್ಬರ ಸಂಗಡವಿದ್ದು ಕಲಿಯಲಾರ ದಂತಹದ್ದನ್ನು ಅವರು ಇಲ್ಲಿ ಕಲಿಯುತ್ತಿದ್ದರು. ಪ್ರವಾದಿವರ್ಯರುಎಸಅ, ಇವರ ಬಗ್ಗೆ ಬಹಳ ಸಂತುಷ್ಟರಾಗಿದ್ದರು. ಈಗ ಹಾರಿಸ ತನ್ನ ಮಗನನ್ನು ಬೇಡಿದಾಗ, ಪ್ರವಾದಿವರ್ಯರಿಗೆ(ಸ) ಬಹಳ ದುಃಖವಾಯಿತು. ಝೈದ್ ತನ್ನ ದೃಷ್ಟಿಯಿಂದ ದೂರವಾಗುವುದನ್ನು ಪ್ರವಾದಿಯವರು(ಸ) ಬಯಸುತ್ತಿರಲಿಲ್ಲ. "ನೀವು ಇದನ್ನು ಬಿಟ್ಟು ಮತ್ತೇನನ್ನೂ ಬಯಸುವುದಿಲ್ಲವೇ?" ಎಂದು ಪ್ರವಾದಿಯವರು(ಸ) ಹಾರಿಸ್‌ರನ್ನು ಕೇಳಿದರು. ಇಲ್ಲವೆಂದು ಅವರು

ಉತ್ತರಿಸಿದಾಗ, ಪ್ರವಾದಿವರ್ಯರು(ಸ) ಹೇಳಿದರು "ಸರಿ! ಝೈದ್‌ನನ್ನು ಕರೆಯಿರಿ. ಅವನು ನಿಮ್ಮೊಡನೆ ಬರಲು ಬಯಸಿದರೆ ನೀವು ಸಂತೋಷದಿಂದ ಕರೆದು ಕೊಂಡು ಹೋಗಿರಿ ಮತ್ತು ಅವನು ನನ್ನೊಡನೆ ಇರಲು ಬಯಸಿದರೆ ದೇವನಾಣೆ! ನಾನು ನನ್ನನ್ನು ಅಗಲದಿರುವವನನ್ನು ಎಂದೂ ಅಗಲಲು ಬಿಡಲಾರೆ."

ಹಾರಿಸ ಹಾಗೂ ಅವರ ಸಹೋದರ ಕಅಬ್ ಈ ಶರತ್ತನ್ನು ಒಪ್ಪಿಕೊಂಡರು. ಮಗನು ಗುಲಾಮನಾಗಿದ್ದಾನೆ. ಸಂಕಷ್ಟದಲ್ಲಿ ಸಿಲುಕಿದ್ದಾನೆ. ಅವನು ಶೀಘ್ರದಲ್ಲೇ ಸ್ವತಂತ್ರನಾಗಲು ಬಯಸುತ್ತಾನೆ ಎಂದೆಲ್ಲಾ ಅವರು ಭಾವಿಸಿದ್ದರು.

ಝೈದ್‌ರವರು(ರ) ಜಗತ್ತಿನಾದ್ಯಂತವಿರುವ ಗುಲಾಮರನ್ನು ವಿಮೋಚಿಸಲು ಆಗಮಿಸಿದ್ದಂತಹ ಆ ಮಹಾನ್ ವ್ಯಕ್ತಿಯ ಗುಲಾಮರಾಗಿದ್ದರು. ಅವರು ಪ್ರವಾದಿ ವರ್ಯರ(ಸ) ಗುಲಾಮರಾಗಿ ಉತ್ತಮ ಮಾತುಗಳನ್ನು ಕಲಿಯುತ್ತಿದ್ದರು, ಮಹಾನ್ ವ್ಯಕ್ತಿ ಆಗುತ್ತಿದ್ದರು ಎಂಬುದು ಅವರಿಗೆ ಗೊತ್ತಿರಲಿಲ್ಲ.

ಈಗ ಝೈದ್‌ರನ್ನು ಕರೆಯಲಾಯಿತು. "ನಿನಗೆ ಈ ಇಬ್ಬರ ಪರಿಚಯವಿದೆಯೇ?" ಎಂದು ಪ್ರವಾದಿವರ್ಯರು(ಸ) ಕೇಳಿದರು. ಝೈದ್(ರ) ಹೇಳಿದರು, "ಹೌದು, ಇವರು ನನ್ನ ತಂದೆ ಹಾರಿಸ ಮತ್ತು ಅವರು ನನ್ನ ಚಿಕ್ಕಪ್ಪ ಕಅಬ್." ಬಳಿಕ ಪ್ರವಾದಿವರ್ಯರು(ಸ) ಹ. ಝೈದ್‌ರಿಗೆ(ರ) ಹೇಳಿದರು, "ನೀನು ನನ್ನನ್ನೂ ಚೆನ್ನಾಗಿ ಬಲ್ಲೆ. ಈಗ ನೀನು ಬಯಸಿದರೆ, ನಿನ್ನ ಮನೆಗೆ ಹೋಗಬಹುದು. ಇಲ್ಲವೆ ನನ್ನ ಜೊತೆಯಲ್ಲಿ ಇರಬಹುದು." ಹ. ಝೈದ್ ಇದನ್ನು ಕೇಳಿ, "ನಾನು ನಿಮ್ಮನ್ನು ಬಿಡುವವನಲ್ಲ. ನೀವೇ ನನ್ನ ತಂದೆ. ನೀವೇ ನನ್ನ ತಾಯಿ" ಎಂದು ಉತ್ತರಿಸಿದರು.

ಮಗನ ಉತ್ತರವನ್ನು ಕೇಳಿದ ಅವರ ತಂದೆ ಹಾಗೂ ಚಿಕ್ಕಪ್ಪ ದಂಗಾದರು. ಅವರು ಹೇಳಿದರು, "ಮಗನೇ ನಮಗೆ ನಿನ್ನ ಮೇಲೆ ಕನಿಕರ ಮೂಡುತ್ತಿದೆ. ನೀನು ಗುಲಾಮತನದಿಂದ ಮುಕ್ತಿ ಪಡೆಯಲು ಬಯಸದೆ ಅದನ್ನೇ ಬಯಸುತ್ತಿರುವಿಯಾ? ನೀನು ನಿನ್ನ ತಂದೆ, ಚಿಕ್ಕಪ್ಪ ಮತ್ತು ಇಡೀ ಕುಟುಂಬಕ್ಕೆ ಪ್ರಿಯನಾಗಿರುವಿ. ಆದರೆ ನೀನು ಇವರೆಲ್ಲರನ್ನೂ ಬಿಡಲು ಸಿದ್ಧನಿರುವಿ. ನೀನು ಸ್ವದೇಶಕ್ಕೆ ತೆರಳಲು ನಿರಾಕರಿಸುತ್ತಿರುವೆಯಾ."

'ಹೌದು' ಎಂದು ಉತ್ತರಿಸಿದ ಹ. ಝೈದ್, "ಪ್ರವಾದಿವರ್ಯರಲ್ಲಿ(ಸ) ನನಗೆ ಕಂಡ ಸದ್ಗುಣಗಳಿಂದಾಗಿ ನಾನು ಅವರನ್ನು ತ್ಯಜಿಸಲಾರೆ" ಎಂದು ಹೇಳಿದರು.

ಈ ಉತ್ತರವನ್ನು ಆಲಿಸಿದ ಪ್ರವಾದಿವರ್ಯರು(ಸ) ಝೈದ್‌ರ ಕೈ ಹಿಡಿದು ಕಅಬಾದ ಕಡೆ ನಡೆದರು. ಝೈದ್‌ರ ತಂದೆ ಹಾಗೂ ಚಿಕ್ಕಪ್ಪ ಕೂಡಾ ಅವರ ಹಿಂದೆ

ನಡೆದರು. ಕಅಬಾವನ್ನು ತಲುಪಿದ ಪ್ರವಾದಿಯವರು(ಸ) ಜೋರಾಗಿ ಹೇಳಿದರು, "ಜನರೇ! ಸಾಕ್ಷಿಯಾಗಿರಿ, ಝೈದ್ ಇಂದಿನಿಂದ ನನ್ನ ಮಗನಾಗಿದ್ದಾನೆ ಇವನು ನನ್ನ ವಾರೀಸುದಾರ ಮತ್ತು ನಾನು ಅವನ ವಾರೀಸುದಾರನಾಗಿರುವೆ."

ಈ ಘೋಷಣೆ ಕೇಳಿದ ಝೈದ್‌ರ ತಂದೆ ಮತ್ತು ಚಿಕ್ಕಪ್ಪ ಹರ್ಷಗೊಂಡರು. ಝೈದ್‌ರಿಗೆ ಇಲ್ಲಿ ಸಿಗುವಂತಹ ಆನಂದ ಮತ್ತು ಸುಖ ಎಲ್ಲಿಯೂ ಲಭ್ಯವಾಗಲಿಕ್ಕೆ ಸಾಧ್ಯವಿಲ್ಲವೆಂದು ಅವರು ಮನಗಂಡರು. ಇಬ್ಬರೂ ಅತೀವ ಸಂತೋಷದಿಂದ ಯಮನ್‌ಗೆ ಮರಳಿದರು. ಝೈದ್‌ರು ಆರಾಮವಾಗಿದ್ದಾರೆ ಮತ್ತು ಅವರು ಮಹಾ ಪುರುಷರಾಗಲಿದ್ದಾರೆ ಎಂದು ಮನೆ ಮಂದಿಗೆಲ್ಲ ತಿಳಿಸಿದರು.

ವಾಸ್ತವದಲ್ಲಿ ಝೈದ್ ದೊಡ್ಡವರಾಗಿ, ಮಹಾ ಪುರುಷರಾದರು. ನಾವು ಈ ಪುಸ್ತಕದಲ್ಲಿ ದೊಡ್ಡವರ ಬಾಲ್ಯದ ಬಗ್ಗೆ ಬರೆಯುತ್ತಿದ್ದೇವೆ. ಆದ್ದರಿಂದ ಹೆಚ್ಚು ವಿವರಿಸ ಬೇಕಾಗಿಲ್ಲ. ಆದರೆ ಇಷ್ಟಂತೂ ಹೇಳಲೇ ಬೇಕು, ಝೈದ್ ಬಿನ್ ಹಾರಿಸ(ರ) ಪ್ರವಾದಿ ವರ್ಯ(ರ(ಸ) ಮತ್ತವರ ಸಂಗಾತಿಗಳ ಹಾಗೂ ಎಲ್ಲ ಜನರ ಪ್ರೀತಿಗೆ ಪಾತ್ರರಾದರು. ಹಿರಿಯ ಸಂಗಾತಿಗಳು ಇವರ ಘನತೆಯನ್ನು ಕಂಡು ಪುಳಕಿತರಾಗುತ್ತಿದ್ದರು.

ಝೈದ್(ರ)ರು ಪ್ರವಾದಿವರ್ಯರಿಗೆ(ಸ) ಅತ್ಯಂತ ಆತ್ಮೀಯರಾಗಿದ್ದರು. ಪ್ರವಾದಿ ವರ್ಯರು(ಸ), ತನ್ನ ತಂದೆಯ ಸೋದರಿಯ ಪುತ್ರಿಯ ಜೊತೆಗೆ ಇವರ ವಿವಾಹ ಮಾಡಿಸಿದರು. ಪ್ರವಾದಿವರ್ಯರು(ಸ) ಸೈನ್ಯ ಕಳುಹಿಸುವಾಗ ಸೈನ್ಯದೊಂದಿಗೆ ಝೈದ್‌ರಿದ್ದರೆ ಅವರನ್ನೇ ಸೇನಾ ನಾಯಕನಾಗಿ ಮಾಡುತ್ತಿದ್ದರು. ಬಹು ದೊಡ್ಡ ಕದನವೊಂದರಲ್ಲಿ ಹ ಅಬೂಬಕರ್, ಹ. ಉಮರ್, ಹ. ಅಬೂ ಉಬೈದಾ ಮತ್ತಿತರ ಹಿರಿಯ ಸಹಾಬಿಗಳು ಪಾಲ್ಗೊಂಡಿದ್ದರು. ಆದರೆ ಪ್ರವಾದಿವರ್ಯರು(ಸ) ಈ ಕದನದ ಮುಖ್ಯಸ್ಥನಾಗಿ ಝೈದ್‌ರನ್ನು ನೇಮಿಸಿ ಕಳಿಸಿದರು. ಇದಕ್ಕಿಂತ ಮಿಗಿಲಾದ ಗೌರವ ಮತ್ತೆ ಯಾವುದಿದೆ? ಅಲ್ಲಾಹನು ಝೈದ್‌ರಿಂದ ಸಂತುಷ್ಟಗೊಂಡನು. ಅಲ್ಲಾಹನ ಪ್ರವಾದಿ ಸಂತುಷ್ಟರಾಗಿದ್ದರು ಮತ್ತು ಸರ್ವ ಮುಸ್ಲಿಮ್ ಸಮುದಾಯ ಸಂತುಷ್ಟವಾಗಿತ್ತು. ಅಲ್ಲದೆ ಅವರು ಅಲ್ಲಾಹನ ಮಾರ್ಗದಲ್ಲಿ ಪ್ರಾಣಾರ್ಪಣೆ ಮಾಡಿ ಹುತಾತ್ಮರಾದರು.

# ಹ. ಝುಬೈರ್(ರ)ರ ಬಾಲ್ಯ

ಈ ಜಗತ್ತಿನಲ್ಲಿಯೇ ಸ್ವರ್ಗವಾಸಿಗಳಾಗಿದ್ದಾರೆ ಎಂದು ಪ್ರವಾದಿ ಮುಹಮ್ಮದ್(ಸ) ಘೋಷಿಸಿದ್ದ ಹತ್ತು ಸಂಗಾತಿಗಳಲ್ಲಿ ಹ. ಝುಬೈರ್‌ರುಎರಎ ಒಬ್ಬರಾಗಿದ್ದರು. ಇವರ ಬಾಲ್ಯದ ಕಥೆಯು ಅತ್ಯಂತ ಸ್ವಾರಸ್ಯಕರವಾಗಿದೆ. ಹ. ಝುಬೈರ್‌ರ(ರ) ತಂದೆ ತೀರಿಕೊಂಡಿದ್ದರು. ಇವರ ತಾಯಿ ಸಫಿಯ್ಯಾರವರು(ರ) ಇವರನ್ನು ಪೋಷಿಸಿದರು. ಸಫಿಯ್ಯಾರವರು ಪ್ರವಾದಿವರ್ಯರ(ಸ) ಪಿತೃ ಸೋದರಿ ಹಾಗೂ ಹಂಝಾರ(ರ) ಸಹೋದರಿಯಾಗಿದ್ದರು. ಇವರು ಅತ್ಯಂತ ವೀರ ವನಿತೆಯಾಗಿದ್ದರು. ಅಲ್ಲದೆ ತನ್ನ ಮಗನೂ ವೀರ ಪರಾಕ್ರಮಿ, ನಿರ್ಭೀತ ಮತ್ತು ಬುದ್ಧಿವಂತನಾಗಬೇಕೆಂದು ಅವರು ಬಯಸುತ್ತಿದ್ದರು. ಅವರು ತನ್ನ ಮಗನಿಂದ ಬಹಳ ಕಠಿಣ ಕೆಲಸಗಳನ್ನು ಮಾಡಿಸಿ ಕೊಳ್ಳುತ್ತಿದ್ದರು. ಕ್ಷಣ ಮಾತ್ರಕ್ಕೂ ಝುಬೈರ್(ರ) ನಿರರ್ಥಕವಾಗಿ ಉಳಿಯ ಬಾರದೆಂಬುದನ್ನು ನೋಡಿಕೊಳ್ಳುತ್ತಿದ್ದರು. ಮಗುವೊಂದು ಅತ್ಯಂತ ಕಠಿಣ ಕೆಲಸದಲ್ಲಿ ತೊಡಗಿರುವುದನ್ನು ನೋಡಿ ಜನರು ಸಫಿಯ್ಯಾರಿಗೆ "ನೀವು ಆ ಮಗುವನ್ನು ಕೊಂದು ಹಾಕುತ್ತೀರಾ?" ಎಂದು ಹೇಳುತ್ತಿದ್ದರು. "ನಾನು ಇವನನ್ನು ಬುದ್ಧಿವಂತ, ವೀರ ಹಾಗೂ ಧೈರ್ಯಶಾಲಿಯಾಗಿ ಮಾಡುತ್ತಿದ್ದೇನೆಂದು ಅವರು ಉತ್ತರಿಸುತ್ತಿದ್ದರು.

ಆದದ್ದು ಸಹ ಹಾಗೆಯೇ! ಝುಬೈರ್(ರ) ಬಾಲ್ಯದಿಂದಲೇ ದೊಡ್ಡ ಪರಾಕ್ರಮಿ ಮತ್ತು ಧೈರ್ಯಶಾಲಿಯಾದರು. ಇನ್ನೂ ಸರಿಯಾಗಿ ಯೌವನಾವಸ್ಥೆ ತಲುಪದಿದ್ದ ಕಾಲದಲ್ಲಿಯೂ ಒಬ್ಬ ಪೈಲ್ವಾನನ ಜೊತೆಗೆ ಕುಸ್ತಿಗೆ ಇಳಿದರು. ಪೈಲ್ವಾನನಿಗೆ ಎಷ್ಟು ಜೋರಾಗಿ ಮುಷ್ಟಿಯಿಂದ ಹೊಡೆದರೆಂದರೆ ಆ ಪೆಟ್ಟಿನಿಂದ ಆತ ನೆಲಕಚ್ಚಿದನಲ್ಲದೆ ಅವನ ಕೈ ಸಹ ಮುರಿಯಿತು. ಜನರು ಪೈಲ್ವಾನನನ್ನು ಹೊತ್ತುಕೊಂಡು ಸಫಿಯ್ಯಾರ ಬಳಿಗೆ ಹೋದರು. ನಡೆದ ಘಟನೆಯನ್ನು ವಿವರಿಸಿದರು. "ಸತ್ಯವನ್ನು ಹೇಳಿರಿ! ನೀವು ನನ್ನ ಮಗನನ್ನು ಯಾವ ರೀತಿಯಾಗಿ ಕಂಡಿರಿ, ವೀರನಂತೆಯೇ ಇಲ್ಲವೆ ಅಂಜುಬುರುಕನಂತೆಯೇ?" ಎಂದು ಅವರು ಕೇಳಿದರು.

ಝುಬೈರ್‌ರವರು(ರ) ಯೌವನಾವಸ್ಥೆಯಲ್ಲಿಯೇ ಇಸ್ಲಾಮ್ ಸ್ವೀಕರಿಸಿದ್ದರು. ಪ್ರವಾದಿಯವರ(ಸ) ಬಗ್ಗೆ ಬಹಳ ಪ್ರೀತಿ ಹೊಂದಿದ್ದರು. ಒಂದು ದಿನ ವಿರೋಧಿಗಳು ಪ್ರವಾದಿವರ್ಯರನ್ನು(ಸ) ಬಂಧನದಲ್ಲಿಟ್ಟರು. ಇದನ್ನು ಕೇಳಿದ ಹ. ಝುಬೈರ್(ರ), ಕೋಪದಿಂದ ತನ್ನ ಖಡ್ಗವನ್ನು ಒರೆಯಿಂದ ತೆಗೆದರು ಮತ್ತು ಪ್ರವಾದಿವರ್ಯರನ್ನು(ಸ) ಹುಡುಕಲು ಹೊರಟರು. ಪ್ರವಾದಿವರ್ಯರನ್ನು(ಸ) ಅವರ ನಿವಾಸದಲ್ಲಿ ಕಂಡರು. ಪ್ರವಾದಿವರ್ಯರು(ಸ), ಝಳಪಿಸುವ ಖಡ್ಗವನ್ನು ಹಿಡಿದಿದ್ದ, ಅತ್ಯಂತ ಕೋಪದಲ್ಲಿರುವ ಝುಬೈರ್‌ರನ್ನು(ರ) ಹೀಗೆ ಕೇಳಿದರು, “ಏನು! ಯಾಕಿಷ್ಟು ಕೋಪ?” “ನಿಮ್ಮನ್ನು ಶತ್ರುಗಳು ಬಂಧನದಲ್ಲಿರಿಸಿದ್ದಾರೆಂದು ನಾನು ಕೇಳಿದೆ. ಆದ್ದರಿಂದ ನಿಮ್ಮನ್ನು ಮುಕ್ತಗೊಳಿಸಲು ನಾನು ಹೊರಟಿದ್ದೆ” ಎಂದು ಉತ್ತರಿಸಿದರು.

ಇಷ್ಟು ಕಿರು ವಯಸ್ಸಿನಲ್ಲೇ ಇಂತಹ ಶೂರತನ ಮತ್ತು ತಮ್ಮ ಮೇಲಿನ ಪ್ರೀತಿಯನ್ನು ಕಂಡು ಪ್ರವಾದಿವರ್ಯರು(ಸ) ಹರ್ಷಭರಿತರಾದರು. ಪ್ರವಾದಿವರ್ಯರ(ಸ) ಸಹಾಯಕ್ಕಾಗಿ ಮೊಟ್ಟ ಮೊದಲ ಬಾರಿಗೆ ಖಡ್ಗವನ್ನು ತನ್ನ ಒರೆಯಿಂದ ತೆಗೆದ ಯುವಕ ಝುಬೈರ್ ಅವರೇ ಆಗಿದ್ದರೆಂದು(ರ) ಚರಿತ್ರೆಯಲ್ಲಿ ಬರೆಯಲಾಗಿದೆ.

# ಬೀಬಿ ಫಾತಿಮಾ(ರ)ರ ಬಾಲ್ಯ

ಹ. ಫಾತಿಮಾ(ರ) ಪ್ರಿಯ ಪ್ರವಾದಿ ಮುಹಮ್ಮದ್‌ರ(ಸ) ಪ್ರೀತಿಯ ಮಗಳಾಗಿದ್ದರು. ಮಹಿಳೆಯರಲ್ಲಿ ಬೀಬಿ ಫಾತಿಮಾರವರು ಅತ್ಯುನ್ನತ ಸ್ಥಾನದಲ್ಲಿದ್ದಾರೆ. ಪ್ರವಾದಿ ಮುಹಮ್ಮದರು(ಸ) ಐವರು ಶ್ರೇಷ್ಠ ಮಹಿಳೆಯರ ಹೆಸರುಗಳನ್ನು ಹೇಳಿದ್ದಾರೆ. ಇವರಿಗೆ ಜಗತ್ತಿನ ಎಲ್ಲ ಮಹಿಳೆಯರ ಮೇಲೆ ಗೌರವ ಸ್ಥಾನವಿದೆಯೆಂದು ತಿಳಿಸಿದ್ದಾರೆ. ಈ ಐವರಲ್ಲಿ ಬೀಬಿ ಫಾತಿಮಾರವರು ಒಬ್ಬರು.

ಫಾತಿಮಾರ ಸಂಪೂರ್ಣ ಜೀವನ (ಜನನದಿಂದ ಮರಣದ ವರೆಗೆ) ಇಸ್ಲಾಮಿನ ಚೌಕಟ್ಟಿನಲ್ಲಿ ರೂಪುಗೊಂಡಿತು. ಅವರು ಬಾಲ್ಯದಿಂದಲೇ ಸಭ್ಯ ಹಾಗೂ ಧರ್ಮಶೀಲರಾಗಿದ್ದರು. ತನ್ನ ಪ್ರೀತಿಯ ತಂದೆ, ತಾಯಿಯವರನ್ನು ಅತ್ಯಂತ ಗೌರವದಿಂದ ಕಾಣುತ್ತಿದ್ದರು. ಅವರ ಮುಂದೆ ಎಂದೂ ಎತ್ತರದ ದನಿಯಲ್ಲಿ ಮಾತನಾಡುತ್ತಿರಲಿಲ್ಲ. ಅವರ ಕಡೆಗೆ ಬೆನ್ನು ಮಾಡಿ ಕುಳಿತುಕೊಳ್ಳುತ್ತಿರಲಿಲ್ಲ. ತನ್ನ ಮಾತಾಪಿತರ ಕೆಲಸಕಾರ್ಯಗಳಲ್ಲಿ ಸಹಕರಿಸುತ್ತಿದ್ದರು. ಫಾತಿಮಾ(ರ) ಬಾಲ್ಯದಿಂದಲೇ ಧೈರ್ಯವಂತೆ ಮತ್ತು ವೀರ ಮಹಿಳೆಯಾಗಿದ್ದರು. ಇವರ ಬಾಲ್ಯದ ಒಂದು ಘಟನೆ ಬಹಳ ಪ್ರಸಿದ್ಧವಿದೆ.

ಪ್ರವಾದಿ ಮುಹಮ್ಮದ್(ಸ) ಒಮ್ಮೆ ಕಅಬಾ ಭವನದಲ್ಲಿ ನಮಾಝ್ ಮಾಡುತ್ತಿದ್ದರು. ಇದು ಮಕ್ಕಾದ ಜನರು ಪ್ರವಾದಿವರ್ಯರ(ಸ) ಶತ್ರುಗಳಾಗಿದ್ದ ಕಾಲದ ಘಟನೆಯಾಗಿತ್ತು. ಪ್ರವಾದಿವರ್ಯರು(ಸ), ಅಲ್ಲಾಹನ ಧರ್ಮದ (ಇಸ್ಲಾಮಿನ) ಪ್ರಚಾರ ಮಾಡುತ್ತಿದ್ದರು. ಇದು ಆ ಜನರಿಗೆ ಹಿಡಿಸದ ಕಾರಣ ಅವರ ವೈರಿಗಳಾಗಿದ್ದರು. ಮಕ್ಕಾದ ಈ ಜನರು ಪ್ರವಾದಿವರ್ಯರ(ಸ) ಮಾರ್ಗದಲ್ಲಿ ವಿಭಿನ್ನ ರೀತಿಯ ಅಡೆತಡೆಗಳನ್ನು ಉಂಟು ಮಾಡುತ್ತಿದ್ದರು ಮತ್ತು ತರತರದ ಕಿರುಕುಳ ಕೊಡುತ್ತಿದ್ದರು.

ಇದೇ ಕಾಲದಲ್ಲಿ ಒಂದು ದಿನ ಪ್ರವಾದಿವರ್ಯರು(ಸ) ಕಅಬಾದಲ್ಲಿ ನಮಾಝ್ ಮಾಡುತ್ತಿದ್ದರು. ವಿರೋಧಿಗಳು ಕೀಟಲೆ ಕೊಡುವ ಹುನ್ನಾರ ನಡೆಸಿದರು.

ಅವರು ಒಂಟೆಯ ಕರುಳನ್ನು ತರಿಸಿ ಪ್ರವಾದಿವರ್ಯರ(ಸ) ಕುತ್ತಿಗೆಯ ಮೇಲೆ ಹಾಕಿದರು. ನಮಾಝ್‌ನ ಸ್ಥಿತಿಯಲ್ಲಿ ಪ್ರವಾದಿವರ್ಯರು(ಸ) ಅದರ ಭಾರದಿಂದ ಬಗ್ಗಿ ಹೋಗುತ್ತಿದ್ದರು. ಇದನ್ನು ನೋಡಿ ವಿರೋಧಿಗಳು ನಗುತ್ತಿದ್ದರು. ಈ ವಿಷಯ ಬೀಬಿ ಫಾತಿಮಾರಿಗೆ(ರ) ಯಾರೋ ತಿಳಿಸಿದರು. ಆಗ ಬೀಬಿ ಫಾತಿಮಾರ(ರ) ವಯಸ್ಸು ಕೇವಲ ಆರು ವರ್ಷವಾಗಿತ್ತು. ಆದರೂ ಈ ಸುದ್ದಿ ಕೇಳುತ್ತಲೇ ತನ್ನ ತಂದೆಯ ಸಹಾಯಕ್ಕಾಗಿ ಓಡಿ ಬಂದರು. ಆ ಒಂಟೆಯ ಕರುಳನ್ನು ತೆಗೆದು ಹಾಕಿ ವಿರೋಧಿಗಳನ್ನು ಹಳಿದರು, ಬೆದರಿಸಿದರು.

# ಹ. ಅಬ್ದುಲ್ಲಾ ಬಿನ್ ಉಮರ್(ರ)ರ ಬಾಲ್ಯ

ಹ. ಅಬ್ದುಲ್ಲಾ ಬಿನ್ ಉಮರ್‌ರವರು(ರ) ಪ್ರವಾದಿವರ್ಯರ(ಸ) ಕಾಲದಲ್ಲಿ ಯುವಕರಾಗಿದ್ದರು. ಆದರೂ ಅವರು ಹಿರಿಯ ಸಂಗಾತಿಗಳಲ್ಲಿ ಗಣಿಸಲ್ಪಡುತ್ತಿದ್ದರು. ದೊಡ್ಡವರಾದಾಗ ಅವರು ಹದೀಸ್‌ನ ಒಬ್ಬ ಮಹಾನ್ ಇಮಾಮರೆಂದು ಪರಿಗಣಿಸಲ್ಪಟ್ಟರು. ಪ್ರವಾದಿವರ್ಯರನ್ನು(ಸ) ಇದ್ದಕ್ಕಿದ್ದಂತೆ ಅನುಸರಣೆ ಮಾಡುವವನನ್ನು ನೋಡಬೇಕಾದರೆ ಅಬ್ದುಲ್ಲಾ ಬಿನ್ ಉಮರ್‌ರನ್ನು(ರ) ನೋಡಿರಿ ಎಂಬ ಮಾತೂ ಪ್ರಚಲಿತದಲ್ಲಿತ್ತು. ಅಲ್ಲದೆ ಇನ್ನೂ ಅನೇಕ ಗೌರವವನ್ನು ಅವರು ಪಡೆದಿದ್ದರು. ಅವರ ಘನತೆ, ಗೌರವದಿಂದ ಜನರು ಅವರನ್ನು ಉಮರ್‌ರ(ರ) ನಂತರ ಖಲೀಫರನ್ನಾಗಿ ಆಯ್ಕೆ ಮಾಡಲು ಇಚ್ಛಿಸಿದ್ದರು. ಆದರೆ, ಹ. ಉಮರ್‌ರವರು(ರ) ತನ್ನ ಮಗನ ಮೇಲೆ ಈ ಭಾರ ಹಾಕಬಾರದೆಂದು ಜನರನ್ನು ತಡೆದಿದ್ದರು. ಇಂತಹ ಮಹಾನ್ ವ್ಯಕ್ತಿಯ ಬಾಲ್ಯಜೀವನ ಚರಿತ್ರೆ ಪುಸ್ತಕಗಳಲ್ಲಿ ಲಭ್ಯವಿದೆ. ಅದು ಕೆಳಗೆ ಬರೆಯಲಾಗಿದೆ.

ಅಬ್ದುಲ್ಲಾ ಬಿನ್ ಉಮರ್‌ರವರು(ರ) ಪ್ರವಾದಿಯವರೊಂದಿಗೆ(ಸ) ಬಹಳ ಪ್ರೀತಿಯಿಂದ ಇರುತ್ತಿದ್ದರು. ಆದ್ದರಿಂದ ಅವರು ಪ್ರವಾದಿವರ್ಯರ(ಸ) ಸಂಪೂರ್ಣ ಅನುಸರಣೆ ಮಾಡಲು ಯತ್ನಿಸುತ್ತಿದ್ದರು. ಪ್ರವಾದಿವರ್ಯರಿಗಾಗಿ(ಸ) ತನ್ನ ಜೀವನವನ್ನು ಮುಡಿಪಾಗಿಸುವ ಆಸಕ್ತಿ ಬಾಲ್ಯದಿಂದಲೇ ಅವರಲ್ಲಿ ಇತ್ತು. ಮುಸ್ಲಿಮರು ಮತ್ತು ಸತ್ಯನಿಷೇಧಿಗಳ ಮಧ್ಯೆ ಸುಪ್ರಸಿದ್ಧ ಬದ್ರ್ ಕದನವು ನಡೆಯಿತು. ಆ ಕಾಲದಲ್ಲಿ ಅಬ್ದುಲ್ಲಾ ಬಿನ್ ಉಮರ್‌ರ(ರ) ವಯಸ್ಸು ಕೇವಲ 13 ವರ್ಷ ಆಗಿತ್ತು. ಆದರೂ ಆಯುಧವನ್ನು ತೆಗೆದುಕೊಂಡು ನಾನು ಪ್ರವಾದಿವರ್ಯರ(ಸ) ಜೊತೆಗೂಡಿ ಆ ಸತ್ಯವಿರೋಧಿಗಳೊಂದಿಗೆ ಹೋರಾಡುತ್ತೇನೆಂದು ಸೈನ್ಯದೊಳಗೆ ಸೇರಿದರು. ಪ್ರವಾದಿವರ್ಯರು(ಸ) ಈ ಕಿರು ವಯಸ್ಸಿನ ಯೋಧನನ್ನು ನೋಡಿ ಹರ್ಷಗೊಂಡರು ಮತ್ತು ಅವರಿಗೆ ತಿಳಿಹೇಳಿ ಮರಳಿಸಿದರು. ಉಹುದ್ ಯುದ್ಧದ ಕಾಲದಲ್ಲಿ ಅಬ್ದುಲ್ಲಾ ಬಿನ್ ಉಮರ್‌ರವರು(ರ) ಕೇವಲ 14 ವರ್ಷ ದವರಾಗಿದ್ದರು. ಈ ಯುದ್ಧದಲ್ಲಿಯೂ ಪಾಲ್ಗೊಂಡರು. ಆದರೆ, ಕಿರುವಯಸ್ಸಿನವರಾಗಿದ್ದರಿಂದ ಆಗಲೂ ತಿಳಿಹೇಳಿ ಮರಳಿ

ಕಳಿಸಿದರು. ಕಂದಕ್ ಕದನದಲ್ಲಿಯೂ ಭಾಗವಹಿಸಿದರು. ಆಗ ಅವರಿಗೆ 15 ವರ್ಷ ವಯಸ್ಸು. ಪ್ರವಾದಿವರ್ಯರು(ಸ) ಇವರ ಶೂರತನ ಮತ್ತು ಧೈರ್ಯವನ್ನು ಕಂಡು ಖುಶಿ ಪಡುತ್ತಿದ್ದರು.

ಈ ಶೂರತನದೊಂದಿಗೆ ಅಲ್ಲಾಹನು ಅವರಿಗೆ ಜ್ಞಾನವನ್ನೂ ಬಾಲ್ಯದಿಂದಲೇ ನೀಡಿದ್ದನು. ಮಾತಿನ ಆಳದ ತನಕ ಹೋಗುವಂತಹ ಬುದ್ಧಿವಂತಿಕೆಯನ್ನು ಅವರು ಪಡೆದುಕೊಂಡಿದ್ದರು. ಒಂದು ಸಲ ಪ್ರವಾದಿ ಮುಹಮ್ಮದ್‌ರ(ಸ) ಸಭೆಯಲ್ಲಿ ಹಿರಿಯ ಸಂಗಾತಿಗಳು ಕುಳಿತುಕೊಂಡಿದ್ದರು. ಪ್ರವಾದಿವರ್ಯರು(ಸ), "ಒಬ್ಬ ಮುಸ್ಲಿಮನಂತೆ ಎಂದೆಂದಿಗೂ ಹಸಿರಾಗಿರುವ ಮರ ಯಾವುದು ಗೊತ್ತೆ? ಆ ಮರದ ಎಲೆಗಳು ಉದುರುವುದಿಲ್ಲ. ಅದು ಸದಾ ಹಣ್ಣು ಕೊಡುತ್ತಿರುತ್ತದೆ" ಎಂದು ತಮ್ಮ ಸಂಗಾತಿಗಳಲ್ಲಿ ಕೇಳಿದರು.

ಪ್ರವಾದಿವರ್ಯರ(ಸ) ಈ ಪ್ರಶ್ನೆಯನ್ನು ಆಲಿಸಿದ ಸಂಗಾತಿಗಳು ಉತ್ತರಿಸದೆ ಮೌನವಾದರು. ಹ. ಅಬೂಬಕರ್ ಮತ್ತು ಹ. ಉಮರ್‌ರಂತಹವರೂ ಸುಮ್ಮನಾದರು. ಅಬ್ದುಲ್ಲಾ ಬಿನ್ ಉಮರ್‌ರಿಗೆ(ರ) ಉತ್ತರ ಹೊಳೆಯಿತು. ಹೇಳಲು ಧೈರ್ಯ ಮಾಡಿದರು. ಆದರೆ, ಹಿರಿಯರ ಮುಂದೆ ಹೇಗೆ ಹೇಳಬೇಕು. ಅವರು ಸುಮ್ಮನಿರುವಾಗ ಈ ಸಣ್ಣವನಾದ ನಾನು ಹೇಳುವುದು ಉಚಿತವಲ್ಲವೆಂದು ಸುಮ್ಮನಾದರು.

ಮನೆಗೆ ತೆರಳಿ "ತನಗೆ ಅದರ ಉತ್ತರ ತಿಳಿದಿತ್ತು, ಅದು ಖರ್ಜೂರದ ಮರ. ಆದರೆ ಹಿರಿಯರ ಮುಂದೆ ಹೇಳುವುದು ಅಗೌರವವೆಂದು ತಿಳಿದು ನಾನು ಹೇಳಲಿಲ್ಲ"ವೆಂದು ತನ್ನ ತಂದೆಗೆ ತಿಳಿಸಿದರು.

ಹ. ಉಮರ್(ರ) ಹೇಳಿದರು, "ಮಗನೇ! ನೀನು ನಿನ್ನ ಉತ್ತರವನ್ನು ಅಲ್ಲಿ ಹೇಳಬೇಕಾಗಿತ್ತು. ನೀನು ಹೇಳುತ್ತಿದ್ದರೆ, ಅದು ನನಗೆ ಎಲ್ಲದಕ್ಕಿಂತ ಹೆಚ್ಚು ಸಂತೋಷ ನೀಡುತ್ತಿತ್ತು."

ಹ. ಅಬ್ದುಲ್ಲಾ ಬಿನ್ ಉಮರ್‌ರ(ರ) ಬಾಲ್ಯದ ವಿವರ ಇಷ್ಟು ದೊರೆತಿದೆ. ಅವರು ದೊಡ್ಡವರಾದಾಗ ಅವರಿಗೆ ಸಿಕ್ಕಿದ ಗೌರವದ ವಿವರ ಗ್ರಂಥಗಳಲ್ಲಿ ತುಂಬಿದೆ. ಹ. ಅಬ್ದುಲ್ಲಾ ಬಿನ್ ಉಮರ್(ರ) ದೊಡ್ಡವರಾಗಿ, ಒಬ್ಬ ಮಹಾನ್ ವ್ಯಕ್ತಿಯಾಗುತ್ತಾರೆಂದು ಎಲ್ಲರೂ ತಿಳಿದುಕೊಂಡಿದ್ದರು. ವಾಸ್ತವದಲ್ಲಿ ಹಾಗೆಯೇ ಆಯಿತು.

# ಹ. ಅಬ್ದುಲ್ಲಾ ಬಿನ್ ಅಬ್ಬಾಸ್(ರ)ರ ಬಾಲ್ಯ

ಹ. ಅಬ್ದುಲ್ಲಾ ಬಿನ್ ಅಬ್ಬಾಸ್ ಪ್ರವಾದಿ ಮುಹಮ್ಮದ್‌ರ(ಸ) ಚಿಕ್ಕಪ್ಪ ಅಬ್ಬಾಸ್‌ರ(ರ) ಮಗನಾಗಿದ್ದರು. ಅವರು ಜನಿಸಿದ ಕೂಡಲೇ ಹ. ಅಬ್ಬಾಸರು(ರ) ಅವರನ್ನು ಪ್ರವಾದಿವರ್ಯರ(ಸ) ಬಳಿಗೆ ತೆಗೆದುಕೊಂಡು ಹೋದರು. ಪ್ರವಾದಿಗಳು ತಮ್ಮ ಪವಿತ್ರ ಎಂಜಲನ್ನು ಆ ಮಗುವಿನ ಬಾಯಿಗೆ ತಾಗಿಸಿ ಆಶೀರ್ವದಿಸಿದರು.

ಹ. ಅಬ್ದುಲ್ಲಾ ಬಿನ್ ಅಬ್ಬಾಸ್(ಸ) ಬಾಲ್ಯದಿಂದಲೇ ಬಹಳ ಬುದ್ಧಿವಂತರು, ಸಾತ್ವಿಕರು ಹಾಗೂ ಧೀಮಂತರಾಗಿದ್ದರು. ಪ್ರತಿಯೊಂದು ವಿಷಯವನ್ನು ಅರಿಯುವ ಅಭಿರುಚಿ ಅವರಲ್ಲಿತ್ತು. ಒಂದು ದಿನ ಪ್ರವಾದಿ ಮುಹಮ್ಮದ್‌ರ(ಸ) ಸಭೆಗೆ ಹೋದರು. ಅಲ್ಲಿಂದ ಓಡುತ್ತಾ ಮನೆಗೆ ಮರಳಿ ಬಂದರು. ತನ್ನ ತಂದೆಯವರಾದ ಅಬ್ಬಾಸ್‌ರಿಗೆ ಹೇಳಿದರು, "ಇವತ್ತು ನಾನು ಪ್ರವಾದಿಯವರ(ಸ) ಹತ್ತಿರ ಒಬ್ಬ ಗೌರವಾನ್ವಿತ ವ್ಯಕ್ತಿಯನ್ನು ಕಂಡಿದ್ದೇನೆ. ನನಗೆ ಅವರ ಪರಿಚಯವಿಲ್ಲ. ಅವರು ಯಾರು ಎಂದು ತಿಳಿದುಕೊಂಡರೆ ಒಳ್ಳೆಯದಿತ್ತು."

ಹ. ಅಬ್ಬಾಸ್‌ರವರು ಆ ವ್ಯಕ್ತಿ ಹ. ಜಿಬ್ರೀಲ್ (ದೇವದೂತ) ಆಗಿರಬೇಕು ಎಂದು ತಿಳಿಸಿದರು. ಈ ಮಾತನ್ನು ಅವರು ಪ್ರವಾದಿಯವರಿಗೆ(ಸ) ತಿಳಿಸಿದರು. ಈ ಮಾತನ್ನು ಆಲಿಸಿದ ಪ್ರವಾದಿಯವರು(ಸ) ವಾತ್ಸಲ್ಯಮಯ ದೃಷ್ಟಿಯಿಂದ ಅಬ್ದುಲ್ಲಾರನ್ನು ನೋಡುತ್ತಾ ತನ್ನ ಬದಿಯಲ್ಲಿ ಕುಳ್ಳಿರಿಸಿದರು, ತಲೆಯ ಮೇಲೆ ಕೈಯಾಡಿಸಿದರು ಮತ್ತು ಹೀಗೆ ಪ್ರಾರ್ಥಿಸಿದರು, "ದೇವನೇ! ಈ ಮಗುವಿಗೆ ಸಮೃದ್ಧಿಯನ್ನು ದಯಪಾಲಿಸು ಮತ್ತು ಇವನ ಮೂಲಕ ಜ್ಞಾನದ ಬೆಳಕನ್ನು ಹರಡಿಸು."

ಪ್ರವಾದಿವರ್ಯರು(ಸ), ಹ. ಅಬ್ದುಲ್ಲಾ ಬಿನ್ ಅಬ್ಬಾಸ್‌ರನ್ನು ಬಹಳ ಪ್ರೀತಿಸುತ್ತಿದ್ದರು. ಹ. ಅಬ್ದುಲ್ಲಾರವರು ಕೂಡಾ ಪ್ರವಾದಿಯವರ(ಸ) ಜೊತೆಗೆ ಬಹಳ ಸಲುಗೆಯಿಂದ ಇರುತ್ತಿದ್ದರು. ಪ್ರವಾದಿಯವರ(ಸ) ಸಣ್ಣಪುಟ್ಟ ಕೆಲಸಗಳನ್ನು ಇವರು

ಮಾಡಿಕೊಡುತ್ತಿದ್ದರು. ಒಂದು ಸಲ ಅವರು ಆಟ ಆಡುತ್ತಿರುವಾಗ ಪ್ರವಾದಿವರ್ಯರು(ಸ) ಆ ಕಡೆಯಿಂದ ಬಂದರು. ಪ್ರವಾದಿವರ್ಯರನ್ನು(ಸ) ನೋಡಿದ ಹ. ಅಬ್ದುಲ್ಲಾ ಒಂದು ಜಾಗದಲ್ಲಿ ಮುಗುಳ್ನಗುತ್ತಾ ಅಡಗಿಕೊಂಡರು. ಪ್ರವಾದಿವರ್ಯರು(ಸ) ಅವರನ್ನು ನೋಡಿ ಹಿಡಿದರು. ತಲೆಯ ಮೇಲೆ ಕೈಯಾಡಿಸಿದರು, ಮತ್ತೆ ಹೇಳಿದರು, "ಹೋಗು, ಮುಆವಿಯಾರನ್ನು ಕರೆದುಕೊಂಡು ಬಾ." [ಹ. ಮುಆವಿಯಾ, ಪ್ರವಾದಿವರ್ಯರ(ಸ) ಆಪ್ತ ಕಾರ್ಯದರ್ಶಿಯಾಗಿದ್ದರು.] ಹ. ಅಬ್ದುಲ್ಲಾ ಓಡುತ್ತಾ ಹೋದರು. ಹ. ಮುಆವಿಯಾರಿಗೆ, "ನಡೆಯಿರಿ ಪ್ರವಾದಿಯವರು(ಸ) ನಿಮ್ಮನ್ನು ಕರೆದಿದ್ದಾರೆ. ಯಾವುದೋ ಅವಶ್ಯಕ ಕೆಲಸವಿದೆ" ಎಂದು ಹೇಳಿದರು.

ಪ್ರವಾದಿವರ್ಯರು(ಸ) ತಮ್ಮ ಮನೆಯಲ್ಲಿ ಏನು ಮಾಡುತ್ತಾರೆ ಎಂಬುದನ್ನು ತಿಳಿದುಕೊಳ್ಳುವ ಕುತೂಹಲ ಹ. ಅಬ್ದುಲ್ಲಾರಿಗೆ ಬಹಳವಿತ್ತು. ಇದನ್ನು ತಿಳಿದು ಕೊಳ್ಳಲು ಅವರಿಗೆ ಯಾವುದೇ ಆತಂಕವಿರಲಿಲ್ಲ. ಒಂದು ಕಡೆ ಅವರು ಪ್ರವಾದಿವರ್ಯರ ಚಿಕ್ಕಪ್ಪನ ಮಗನಾದರೆ, ಇನ್ನೊಂದು ಕಡೆ ಹ. ಮೈಮೂನಾರ(ರ) ಸಹೋದರಿಯ ಪುತ್ರರಾಗಿದ್ದರು. ಈ ಸಂಬಂಧದಿಂದಾಗಿ ಹ. ಅಬ್ದುಲ್ಲಾರವರು(ರ) ಯಾವುದೇ ಅಡ್ಡಿ ಆತಂಕವಿಲ್ಲದೆ ಪ್ರವಾದಿಯ ಮನೆಗೆ ಹೋಗಿ ಬರುತ್ತಿದ್ದರು. ಪ್ರವಾದಿವರ್ಯರ(ಸ) ಪತ್ನಿ ಮೈಮೂನಾ(ರ)ರವರೂ ಇವರನ್ನು ಬಹಳ ವಾತ್ಸಲ್ಯದಿಂದ ಕಾಣುತ್ತಿದ್ದರು. ಹೆಚ್ಚಾಗಿ ಅವರು ತನ್ನ ಚಿಕ್ಕಪ್ಪನ ಹತ್ತಿರವೇ ರಾತ್ರಿಯ ವೇಳೆ ಮಲಗುತ್ತಿದ್ದರು.

ಒಂದು ರಾತ್ರಿ ಹ. ಅಬ್ದುಲ್ಲಾ(ರ) ತನ್ನ ಚಿಕ್ಕಮ್ಮನ ಮನೆಯಲ್ಲಿದ್ದರು. ಇನ್ನೂ ಮಲಗಿರಲಿಲ್ಲ, ಪ್ರವಾದಿವರ್ಯರು(ಸ) ವುಝೂ ಮಾಡಲು ಬಯಸಿದರು. ಆದ್ದರಿಂದ ಅವರು ಅತ್ತಿತ್ತ ನೋಡಿದರು. ಹ. ಅಬ್ದುಲ್ಲಾ(ರ) ಪ್ರವಾದಿವರ್ಯರ(ಸ) ಈ ವರ್ತನ ಯಿಂದ ತಿಳಿದುಕೊಂಡು, ಸದ್ದಿಲ್ಲದೆ ವುಝೂಗಾಗಿ ನೀರು ತಂದಿಟ್ಟು ಹೋಗಿ ಮಲಗಿ ದರು. ಪ್ರವಾದಿಯವರು(ಸ) ವುಝೂ ಮುಗಿಸಿ ಕೇಳಿದರು, "ನೀರು ತಂದಿಟ್ಟದ್ದು ಯಾರು?" ಮೈಮೂನಾರವರು(ರ) ಪ್ರವಾದಿಯವರಿಗೆ(ಸ) ವಿಷಯ ತಿಳಿಸಿದಾಗ ಪ್ರವಾದಿವರ್ಯರು(ಸ) ಸಂತೋಷದಿಂದ ಹ. ಅಬ್ದುಲ್ಲಾರಿಗಾಗಿ ಪ್ರಾರ್ಥಿಸಿದರು, "ಅಲ್ಲಾಹನೇ! ಈ ಮಗುವಿಗೆ ಧರ್ಮದ ಜ್ಞಾನವನ್ನು ದಯಪಾಲಿಸು. ಇವನಿಗೆ ಪ್ರತಿಯೊಂದು ವಿಷಯದ ಆಳವನ್ನು ತಿಳಿಯುವ ಜ್ಞಾನ ಮತ್ತು ಸಾಮರ್ಥ್ಯ ನೀಡು."

ಒಂದು ರಾತ್ರಿ ಪ್ರವಾದಿವರ್ಯರು(ಸ) ಎಚ್ಚೆತ್ತರು. ವುಝೂ ಮಾಡಿದರು. ನಮಾಝ್‌ಗಾಗಿ ನಿಂತುಕೊಂಡರು. ಹ. ಅಬ್ದುಲ್ಲಾರವರು ಮಲಗಿಕೊಂಡಿದ್ದರು. ಎಚ್ಚರವಾಗಿ ನೋಡಿದರು. ತಾನೂ ವುಝೂ ಮಾಡಿ ಪ್ರವಾದಿವರ್ಯರ(ಸ) ಎಡಗಡೆ ನಿಂತು ಕೊಂಡರು. ಪ್ರವಾದಿವರ್ಯರು(ಸ) ಅವರ ತಲೆ ಹಿಡಿದು ಬಲಗಡೆ

ನಿಲ್ಲುವಂತೆ ಸಂಜ್ಞೆ ಮಾಡಿದರು. ಹೀಗೆ ಅಬ್ದುಲ್ಲಾರವರು ಪ್ರವಾದಿಯವರ(ಸ) ಹಿಂದೆ ಹೋಗಿ ನಿಂತರು. ಆಗ ಪ್ರವಾದಿವರ್ಯರು(ಸ) ಅವರ ಕೈ ಹಿಡಿದು ಎಳೆದು ತನ್ನ ಸಮೀಪ ನಿಲ್ಲಿಸಿದರು. ಸಮೀಪ ನಿಲ್ಲುವಾಗ ಅವರು ಗಾಬರಿಗೊಂಡಿದ್ದರು. ಇದೇ ಸ್ಥಿತಿಯಲ್ಲಿ ಹಾಗೆಯೇ ನಿಂತುಕೊಂಡಿದ್ದರು. ನಮಾಝ್ ಪೂರ್ಣಗೊಳಿಸಿ ಪ್ರವಾದಿವರ್ಯರು(ಸ), "ನೀನೇಕೆ ಈ ರೀತಿಯಾಗಿರುವೆ?" ಎಂದು ಅಬ್ದುಲ್ಲಾರೊಡನೆ ಕೇಳಿದರು. ಇದಕ್ಕೆ ಹ. ಅಬ್ದುಲ್ಲಾರವರು, "ಅಲ್ಲಾಹನ ಪ್ರವಾದಿಗಳೇ! ತಮ್ಮ ಮಗ್ಗುಲಲ್ಲಿ ನಿಂತುಕೊಳ್ಳುವುದು ಸರಿಯೇ? ತಾವಂತೂ ಅಲ್ಲಾಹನ ಪ್ರವಾದಿ ಯಾಗಿರುವಿರಿ." ಹ. ಅಬ್ದುಲ್ಲಾರ ಈ ಬುದ್ಧಿವಂತಿಕೆ ಮತ್ತು ಗೌರವಪೂರ್ಣ ಮಾತುಗಳನ್ನು ಕೇಳಿ ಪ್ರವಾದಿವರ್ಯರು(ಸ) ಅವರಿಗಾಗಿ ಪ್ರಾರ್ಥಿಸಿದರು.

ಅಬ್ದುಲ್ಲಾ(ರ)ರವರು, ಪ್ರವಾದಿವರ್ಯರ(ಸ) ಅತ್ಯಂತ ನಿಕಟವರ್ತಿಯಾಗಿದ್ದರು. ಆದ್ದರಿಂದ ಯಾವಾಗಲೂ ಪ್ರವಾದಿವರ್ಯರ(ಸ) ಬಳಿ ಇರಲು ಪ್ರಯತ್ನಿಸುತ್ತಿದ್ದರು. ಪ್ರವಾದಿವರ್ಯರು(ಸ) ತಮ್ಮ ಸಂಗಾತಿಗಳೊಂದಿಗೆ ಕುಳಿತುಕೊಂಡಾಗಲೂ ಅವರು ಅಲ್ಲಿಗೆ ಬರುತ್ತಿದ್ದರು. ಪ್ರವಾದಿಗಳು ಅವರನ್ನು ತಮ್ಮ ಬಳಿ ಕುಳ್ಳಿರಿಸುತ್ತಿದ್ದರು.

ಒಂದು ಸಲ ಅಬ್ದುಲ್ಲಾ(ರ) ಪ್ರವಾದಿವರ್ಯರ(ಸ) ಬಲಗಡೆಯಲ್ಲಿ ಕುಳಿತು ಕೊಂಡಿದ್ದರು. ಅಷ್ಟರಲ್ಲಿ ಎಲ್ಲಿಂದಲೋ ಹಾಲು ಬಂದಿತು. ಪ್ರವಾದಿಯವರು(ಸ) ಹಾಲಿನ ಪಾತ್ರೆಯಿಂದ ಒಂದೆರಡು ಗುಟುಕು ಕುಡಿದರು. ಪ್ರವಾದಿ(ಸ) ಯಾವುದೇ ಕೆಲಸ ಬಲಗಡೆಯಿಂದ ಆರಂಭಿಸುತ್ತಿದ್ದರು. ಉಳಿದ ಹಾಲನ್ನು ತಮ್ಮ ಸಂಗಾತಿಗಳಿಗೆ ಕೊಡಲು ಅವರು ಬಯಸಿದರು. ಆದರೆ ಬಲಗಡೆ ನೋಡಿದಾಗ ಅಬ್ದುಲ್ಲಾ ಬಿನ್ ಅಬ್ಬಾಸ್(ರ) ಕುಳಿತಿದ್ದರು. "ಮಗನೇ! ನನ್ನ ರೂಢಿಯ ಪ್ರಕಾರ ನಿನ್ನ ಸರತಿಯೇ ಇದೆ. ಆದರೆ ನೀನು ಒಪ್ಪಿದರೆ ನಿನಗಿಂತ ಮೊದಲು ಈ ಪಾತ್ರೆಯನ್ನು ಹಿರಿಯ ಸಂಗಾತಿಗಳಿಗೆ ಕೊಡುತ್ತೇನೆ" ಎಂದು ಪ್ರವಾದಿ(ಸ) ಹೇಳಿದರು. ಪ್ರವಾದಿವರ್ಯರು(ಸ) ಈ ಮಾತನ್ನು ಹೇಳುತ್ತಿರುವಾಗ ಅವರ ದೃಷ್ಟಿ ಪ್ರವಾದಿವರ್ಯರು(ಸ) ತನ್ನ ತುಟಿಗಳಿಂದ ಹಾಲು ಕುಡಿದಿದ್ದ ಪಾತ್ರೆಯ ಆ ಭಾಗದ ಕಡೆ ಇತ್ತು. ಅಬ್ದುಲ್ಲಾ ಹೇಳಿದರು, "ಓ ಅಲ್ಲಾಹನ ಪ್ರವಾದಿಗಳೇ! ನಾನು ಎಂತಹ ದೊಡ್ಡ ವಸ್ತುವಾದರೂ ತ್ಯಾಗ ಮಾಡಬಲ್ಲೆ. ಆದರೆ ಯಾವ ಭಾಗದಿಂದ ತಾವು ತಮ್ಮ ತುಟಿಗಳನ್ನಿಟ್ಟು ಹಾಲು ಕುಡಿದಿದ್ದಿರೋ ಆ ಭಾಗದಿಂದ ಹಾಲು ಕುಡಿಯುವಲ್ಲಿ ಮೊದಲಿಗನಾಗುವ ಭಾಗ್ಯದಿಂದ ವಂಚಿತನಾಗಲು ನಾನು ಎಂದೂ ಸಿದ್ಧನಿಲ್ಲ.(ರ)"

ಪ್ರವಾದಿವರ್ಯರು(ಸ) ಮುಗುಳ್ನಕ್ಕು, ಪಾತ್ರೆಯನ್ನು ಅವರಿಗೆ ನೀಡಿದರು. ಅವರು ಎರಡು ಗುಟುಕು ಹಾಲು, ಪಾತ್ರೆಯ ಆ ಭಾಗದಿಂದ ಕುಡಿದ ನಂತರ

ಪಾತ್ರೆಯನ್ನು ಇನ್ನೊಬ್ಬರಿಗೆ ಕೊಡಲಾಯಿತು.

ಈ ರೀತಿಯಾಗಿ ಹ. ಅಬ್ದುಲ್ಲಾರ ಬಾಲ್ಯ ಪ್ರವಾದಿವರ್ಯರಎಸಪಿ ಜೊತೆಯಲ್ಲಿ ಕಳೆಯಿತು. ಅಲ್ಲಿದ್ದುಕೊಂಡು ಅವರು ಬಹಳಷ್ಟು ಕಲಿತರು, ಪದೇ ಪದೇ ಅವರು ಪ್ರವಾದಿವರ್ಯರಿಂದ ಆಶೀರ್ವಾದ ಪಡೆದರು. ಇದು ಅವರ ಸೌಭಾಗ್ಯವಾಗಿತ್ತು. ಈ ಕಾರಣದಿಂದಲೇ ಜನರು, ಇವರನ್ನು ಬಾಲ್ಯದಿಂದಲೇ ಬಹಳ ತಿಳುವಳಿಕೆಯುಳ್ಳವ ನೆಂದು ಭಾವಿಸುತ್ತಿದ್ದರು. ಪ್ರವಾದಿವರ್ಯರು ಯಾವ ವಿಷಯದಲ್ಲಿ ಏನು ಹೇಳಿದರು ಎಂದು ಜನರು ಅವರಲ್ಲಿ ಕೇಳುತ್ತಿದ್ದರು.

ಹ. ಅಬ್ದುಲ್ಲಾ ಹದಿಮೂರು ವರ್ಷದವರಾಗಿರುವಾಗಲೇ ಪ್ರವಾದಿವರ್ಯರನ್ನುಎಸಪಿ ಅಲ್ಲಾಹನು ತನ್ನ ಬಳಿಗೆ ಕರೆದುಕೊಂಡನು. ಎಳೆಯ ಮನಸ್ಸಿನಲ್ಲಿ ಅವರು ಪ್ರವಾದಿವರ್ಯರಿಂದಎಸಪಿ ಕಲಿತು ನೆನಪಿಟ್ಟಿದ್ದರಿಂದ, ಹ.ಉಮರ್‌ರವರು ಹಿರಿಯ ಸಹಾಬಿಗಳ ಸಭೆಗಳಲ್ಲಿ ಅವರನ್ನು ಕುಳ್ಳಿರಿಸುತ್ತಿದ್ದರು. ಅಲ್ಲಿ ಧರ್ಮದ ಬಗ್ಗೆ ಚರ್ಚೆ ನಡೆಯುವಾಗ ಅವರಿಗೆ ಅವಕಾಶ ನೀಡಲಾಗುತ್ತಿತ್ತು.

ಒಂದು ಸಲ ಜ್ಞಾನಿಗಳಾದ, ಪಂಡಿತರಾದ ಸಹಾಬಿಗಳೊಂದಿಗೆ ಹ. ಉಮರ್ ಕೂಡಾ ಕುಳಿತಿದ್ದರು. ಹ. ಅಬ್ದುಲ್ಲಾರವರು ಅಲ್ಲಿ ಉಪಸ್ಥಿತರಿದ್ದರು.

ಹ. ಉಮರ್‌ರವರು ಸೂರಾ ನಸ್ರ್‌ನ ಕೊನೆಯ ತನಕ ಓದಿ ಹೀಗೆ ಕೇಳಿದರು, ಎಈ ಬಗ್ಗೆ ನಿಮ್ಮ ಅಭಿಪ್ರಾಯವೇನುಲ ಇದರರ್ಥ ಏನಾಗಿದೆಲು ಎಲ್ಲ ಹಿರಿಯರು ಇದರರ್ಥ ವಿವರಿಸಿದರು. ಹ. ಅಬ್ದುಲ್ಲಾರಿಗೂ ಕೇಳಲಾಯಿತು. ಅವರು ಈ ಸೂರಾದಲ್ಲಿ ಪ್ರವಾದಿವರ್ಯರಎಸಪಿ ನಿಧನದ ಸುಳಿವು ನೀಡಲಾಗಿದೆಯೆಂದು ಉತ್ತರಿಸಿದರು. ಇದನ್ನು ಕೇಳಿದ ಉಮರ್‌ಎರಪಿ ಒಮ್ಮೆಲೆ ಎದ್ದು ನಿಂತು ಸಂತೋಷಗೊಂಡು ಭಲೇ ಭಲೇ ನನ್ನದೂ ಇದೇ ವಿಚಾರವಾಗಿತ್ತು ಎಂದು ಹೇಳಿದರು.

ಕೆಲವೊಂದು ಸಲ ಹಿರಿಯ ಸಹಾಬಿಗಳೊಂದಿಗೆ ಹ. ಅಬ್ದುಲ್ಲಾ ಬಿನ್ ಅಬ್ಬಾಸ್‌ರು ಕುಳಿತುಕೊಂಡಿರುವುದನ್ನು ನೋಡಿ ಜನರು ಇದು ಸರಿಯಲ್ಲವೆನ್ನುತ್ತಿದ್ದರು. ಹಿರಿಯರ ಜೊತೆಗೆ ಈ ಬಾಲಕನನ್ನು ಕುಳ್ಳಿರಿಸಬಾರದೆಂದು ಹೇಳುತ್ತಿದ್ದರು. ಇದಕ್ಕೆ ಹ. ಉಮರ್‌ರವರು, ಎಈ ಬಾಲಕನ ಬುದ್ಧಿವಂತಿಕೆಯ ವೈಭವ ನಿಮ್ಮೆಲ್ಲರ ಮೇಲೆ ಪ್ರಕಟಗೊಂಡಿದ್ದು ನಿಮಗೆಲ್ಲರಿಗೂ ತಿಳಿದ ವಿಷಯವೇ ಆಗಿದೆ ಎಂದು ಉತ್ತರಿಸಿದರು.

ಯಾವ ಮಗುವಿನ ಮೇಲೆ ಅಲ್ಲಾಹನ ಅಪಾರವಾದ ಅನುಗ್ರಹವಾಗಿದೆಯೋ ಆತ ದೊಡ್ಡವನಾಗಿ, ಎಷ್ಟು ದೊಡ್ಡ ಮಹಾನನಾಗಿರಬೇಕುಅ ಕುರ್‌ಆನ್, ಹದೀಸ್,

ಫಿಕ್ಹ್, ಸಾಹಿತ್ಯ ಮತ್ತು ಕಾವ್ಯವೇ ಮೊದಲಾದುವುಗಳ ಕುರಿತು ಎಷ್ಟು ಜ್ಞಾನ ಭಂಡಾರ ಅವರಲ್ಲಿತ್ತೆಂದರೆ ಆಗಿನ ಶ್ರೇಷ್ಠ ಮಹಾಜ್ಞಾನಿಗಳಾದ ಅಬ್ದುಲ್ಲಾ ಬಿನ್ ಮಸ್‌ಊದ್‌ರವರೂ ಸಹ ಸಮ್ಮತಿಸುತ್ತಿದ್ದರು. ಅಲ್ಲದೆ, ಅಬ್ದುಲ್ಲಾ ಬಿನ್ ಅಬ್ಬಾಸ್‌ರವರು ಕುರ್‌ಆನಿನ ಸುಂದರ ವ್ಯಾಖ್ಯಾನಕಾರರಾಗಿದ್ದಾರೆಂದು ಅವರು ಹೇಳುತ್ತಿದ್ದರು.

ಅಬ್ದುಲ್ಲಾ ಬಿನ್ ಅಬ್ಬಾಸ್‌ರ ಜೀವನಕ್ಕೆ ಸಂಬಂಧಿಸಿ ಬಹಳ ವಿಷಯಗಳು ಗ್ರಂಥಗಳಲ್ಲಿ ಲಭ್ಯವಿದೆ. ಅದರಿಂದ ಅವರ ಘನತೆ, ಗೌರವ ತಿಳಿಯುತ್ತದೆ. ಇಲ್ಲಿ ನಾವು ಕೇವಲ ಅವರ ಬಾಲ್ಯದ ಬಗ್ಗೆ ಮಾತ್ರ ಬರೆದಿದ್ದೇವೆ. ಇದರಿಂದಲೇ ಅವರು ಬೆಳೆದು ಎಷ್ಟು ದೊಡ್ಡ ವಿದ್ವಾಂಸರಾಗಿರಬಹುದೆಂದು ತಿಳಿದುಕೊಳ್ಳಬಹುದು.

ಒಂದು ಸಲ ಆಫ್ರಿಕಾದ ದೊರೆ ಜರ್‌ಜೀರ್‌ನ ಹತ್ತಿರ ಒಂದು ಕಾರ್ಯವನ್ನು ನೆರವೇರಿಸಲು ಕಳಿಸಲ್ಪಟ್ಟರು. ಆತನು ಇವರನ್ನು ನೋಡಿ ಮುಸ್ಲಿಮರ ಖಲೀಫಾ ಒಬ್ಬ ಹುಡುಗನನ್ನು ಕಳಿಸಿದ್ದಾನೆಂದು ಹೇಳಿ ನಕ್ಕನು. ಆದರೆ ಚರ್ಚೆ ಆರಂಭವಾದಾಗ ದಂಗಾದನು. "ನೀವು ಅರಬಸ್ಥಾನದ ಮಹಾ ವಿದ್ವಾಂಸರಾಗಿದ್ದೀರೆಂದು ನಾನು ಭಾವಿಸುತ್ತೇನೆ" ಎಂದು ಆತ ಹೇಳಿದನು.

ಹೀಗಿದ್ದರು ಅಬ್ದುಲ್ಲಾ ಬಿನ್ ಅಬ್ಬಾಸ್(ರ). ಅಲ್ಲಾಹನು ಅವರಿಂದ ಸಂತುಷ್ಟಗೊಳ್ಳಲಿ.

# ಹ. ಹಸನ್(ರ) ಮತ್ತು ಹುಸೈನ್(ರ)ರ ಬಾಲ್ಯ

ಹ. ಹಸನ್ ಹಾಗೂ ಹುಸೈನ್‌ರವರು ಪ್ರವಾದಿ ಮುಹಮ್ಮದ್‌ರವರ(ಸ) ೊಮ್ಮಕ್ಕಳಾಗಿದ್ದರು. ಹ. ಅಲೀ ಮತ್ತು ಫಾತಿಮಾರ ಮಕ್ಕಳು. ಅಲ್ಲಾಹನು ಇಬ್ಬರು ಹೋದರರಿಗೂ ಬಹಳ ಜ್ಞಾನ ನೀಡಿದ್ದನು. ಇಬ್ಬರೂ ಬಹಳ ಬುದ್ಧಿವಂತಿಕೆಯಿಂದಲೇ ಾತಾಡುತ್ತಿದ್ದರು. ತಮಗಿಂತ ವಯಸ್ಸಿನಲ್ಲಿ ಹಿರಿಯರಾದವರಿಗೆ ಏನಾದರೂ ತಿಳಿಸ ಯಸಿದರೆ ಬಹಳ ಚಾತುರ್ಯದಿಂದ ತಿಳಿಸುತ್ತಿದ್ದರು. ಇಂತಹದ್ದೇ ಒಂದು ಘಟನೆ ಹಳ ಸ್ವಾರಸ್ಯಕರವಾಗಿದೆ. ನೀವೂ ಕೇಳಿರಿ.

ಹ. ಇಮಾಮ್ ಹಸನ್ ಮತ್ತು ಹುಸೈನ್‌ರವರು ಬಾಲ್ಯದಿಂದಲೇ ನಮಾಝ್, ುಝೂ ಹಾಗೂ ಧರ್ಮದ ಇನ್ನಿತರ ವಿಷಯಗಳ ಬಗ್ಗೆ ಕಲಿತುಕೊಂಡಿದ್ದರು. ಂದು ಸಲ ಅವರು ಒಬ್ಬ ವ್ಯಕ್ತಿ ವುಝೂ ಮಾಡುತ್ತಿರುವುದನ್ನು ನೋಡಿದರು. ತ ತಪ್ಪುತಪ್ಪಾಗಿ ವುಝೂ ಮಾಡುತ್ತಿದ್ದನು. ಈತನ ವುಝೂವನ್ನು ಯಾವ ೀತಿಯಾಗಿ ಸರಿಪಡಿಸಬೇಕೆಂಬುದರ ಬಗ್ಗೆ ಇಬ್ಬರು ಸಹೋದರರೂ ಯೋಚಿಸ ೊಡಗಿದರು. ಸ್ವಲ್ಪದರಲ್ಲಿಯೇ ಅವರಿಗೊಂದು ಉಪಾಯ ಹೊಳೆಯಿತು.

ಆ ವ್ಯಕ್ತಿಗೆ ಹೀಗೆಂದರು, "ಹಿರಿಯರೇ! ನಾವಿಬ್ಬರೂ ಅಣ್ಣ ತಮ್ಮಂದಿರಾಗಿದ್ದೇವೆ. ಾವು ತಮ್ಮ ಮುಂದೆ ವುಝೂ ಮಾಡುತ್ತೇವೆ. ನಮ್ಮಿಬ್ಬರಲ್ಲಿ ಯಾರು ಸರಿಯಾಗಿ ುಝೂ ಮಾಡುತ್ತಾನೆಂದು ತಾವು ನೋಡಬೇಕು." ಹೀಗೆ ಹೇಳಿ ಅವರಿಬ್ಬರೂ ುಝೂ ಮಾಡಲು ಆರಂಭಿಸಿದರು. ಆತ ಇಬ್ಬರು ಸಹೋದರರು ವುಝೂ ಾಡುವುದನ್ನು ನೋಡಿ ವುಝೂ ಮಾಡುವ ಸರಿಯಾದ ವಿಧಾನ ಇದೇ ಆಗಿದೆ ಂದು ಮನವರಿಕೆ ಮಾಡಿಕೊಂಡರು. ಅವರ ಬುದ್ಧಿವಂತಿಕೆಯನ್ನು ಕಂಡ ಆ ್ಯಕ್ತಿಯು ಸಂತೋಷಗೊಂಡು, ಈ ಇಬ್ಬರು ಮಕ್ಕಳು ಬಹಳ ಚಾತುರ್ಯದಿಂದ ನನಗೆ ವುಝೂವಿನ ಸರಿಯಾದ ವಿಧಾನವನ್ನು ತಿಳಿಸಿದರು. ಯಾರು ಪ್ರವಾದಿ(ಸ), ಲೀ ಮತ್ತು ಫಾತಿಮಾರಿಂದ(ರ) ಕಲಿತಿರುವರೋ ಅಂತಹವರ ಬಗ್ಗೆ ಇನ್ನೇನು ೇಳಲಿಕ್ಕಿದೆ?" ಎನ್ನುತ್ತಾ ಹೊರಟು ಹೋದರು.

ಚಿಕ್ಕಂದಿನಲ್ಲಿ ಒಮ್ಮೆ ಇಬ್ಬರು ಸೋದರರು ಪರಸ್ಪರ ಜಗಳಾಡಿದರು. ತಾಯಿಯ ಮುಂದೆ ದೂರಿದರು. ಇದನ್ನು ಕೇಳಿದ ಫಾತಿಮಾರು, "ಹಸನ್ ಹೊಡೆದನೊ ಅಥವಾ ಹುಸೈನ್ ಹೊಡೆದನೋ ಎಂಬುದು ನನಗೇನೂ ಬೇಕಾಗಿಲ್ಲ. ಅಲ್ಲಾಹನ ನಿಮ್ಮಿಬ್ಬರ ಮೇಲೆ ಸಿಟ್ಟಾಗಿದ್ದಾನೆಂಬುದು ಮಾತ್ರ ನನಗೆ ಗೊತ್ತು. ಏಕೆಂದ ಅಲ್ಲಾಹನು ಜಗಳಾಡುವವರನ್ನು ಪ್ರೀತಿಸುವುದಿಲ್ಲ."

ಇದನ್ನು ಕೇಳಿದ ಇವರಿಬ್ಬರೂ ತಲೆ ತಗ್ಗಿಸಿ ನಿಂತುಕೊಂಡರು. ಅನಂತರ "ಅಮ್ಮಾ! ನಮ್ಮನ್ನು ಕ್ಷಮಿಸಿ, ನಾವು ಇನ್ನೆಂದೂ ಜಗಳಾಡುವುದಿಲ್ಲ" ಎಂದ ಹೇಳಿದರು.

"ಅಲ್ಲಾಹನಲ್ಲಿ ಕ್ಷಮೆ ಯಾಚಿಸಿರಿ. ವುಝೂ ಮಾಡಿರಿ ಮತ್ತು ನಮಾಝ ಮಾಡಿ ಅಲ್ಲಾಹನನ್ನು ಸಂತುಷ್ಟಗೊಳಿಸಿರಿ" ಎಂದು ಫಾತಿಮಾ ಉತ್ತರಿಸಿದರು.

ಸೋದರರೀರ್ವರೂ ವುಝೂ ಮಾಡಿ ನಮಾಝ್‌ಗಾಗಿ ನಿಂತುಕೊಂಡರು ವಿನಯಪೂರ್ವಕ ತಮ್ಮ ಒಡೆಯನ ಮುಂದೆ ಅಂಗಲಾಚಿ ಕ್ಷಮೆ ಯಾಚಿಸಿದರು ಎಂತಹ ಸಾತ್ವಿಕರಾಗಿದ್ದರು ಅವರು! ಆ ಇಬ್ಬರು ಅಣ್ಣತಮ್ಮಂದಿರು ಎಷ್ಟು ಸದ್ಗುಣಿಗಳಾಗಿದ್ದರು ಮತ್ತು ಹ. ಫಾತಿಮಾ(ರ) ಎಷ್ಟು ಒಳ್ಳೆಯವರಾಗಿದ್ದರು ಅಲ್ಲಾಹನು ಅವರೆಲ್ಲರಿಂದ ಸಂತುಷ್ಟನಾಗಲಿ.

# ಹ. ಅನಸ್(ರ)ರ ಬಾಲ್ಯ

ಪ್ರವಾದಿ ಮುಹಮ್ಮದ್(ಸ) ಮಕ್ಕಾವನ್ನು ಬಿಟ್ಟು ಮದೀನಾ ತಲಪಿದ ಕೆಲ ದಿನಗಳ ನಂತರ ಒಬ್ಬ ಬುದ್ಧಿವಂತ ಮಹಿಳೆಯು ಅವರ ಬಳಿ ಬಂದಳು. ಆಕೆಯ ಜೊತೆ ಏಳು ಎಂಟು ವರ್ಷದ ಒಬ್ಬ ಬಾಲಕ ಇದ್ದನು. ಆ ಬುದ್ಧಿವಂತ ಮಹಿಳೆಯು ಪ್ರವಾದಿವರ್ಯರಿಗೆ(ಸ) ಹೇಳಿದಳು, "ಅಲ್ಲಾಹನ ಪ್ರವಾದಿಗಳೇ! ಇವನು ನನ್ನ ಮಗ, ಇವನನ್ನು ನಾನು ಬಹಳ ಪ್ರೀತಿಸುತ್ತೇನೆ. ನಾನು ಮುಸ್ಲಿಮಳಾಗಿರುತ್ತೇನೆ ಮತ್ತು ನನ್ನ ಮಗನೂ ಸಹ ನೈಜ ಮುಸ್ಲಿಮನಾಗಿರಬೇಕೆಂದು ಬಯಸುತ್ತೇನೆ. ಇವನನ್ನು ನಾನು ತಮ್ಮ ಬಳಿಗೆ ಕರೆ ತಂದಿದ್ದೇನೆ. ಇದಕ್ಕೆ ಕಾರಣ ಇಷ್ಟೆ. ಇವನು ತಮ್ಮ ಬಳಿ ಇದ್ದುಕೊಂಡು ತಾವು ಪ್ರಸಾರ ಮಾಡುತ್ತಿರುವ ತತ್ವಗಳನ್ನು ಕಲಿತುಕೊಳ್ಳಲಿ."

ಪ್ರವಾದಿವರ್ಯರು(ಸ) ಆ ಮಹಿಳೆಯ ಮಾತನ್ನು ಒಪ್ಪಿದರು. ಬಾಲಕನನ್ನು ತಮ್ಮಲ್ಲಿ ಇರಿಸಿಕೊಂಡರು. ಆತ ತಾಯಿಯಂತೆ ಬಹಳ ಬುದ್ಧಿವಂತನಾಗಿದ್ದನು. ಪ್ರವಾದಿವರ್ಯರು(ಸ) ಆಡುವ ಮಾತುಗಳನ್ನೂ ಹೇಳುವ ನುಡಿಗಳನ್ನೂ ಗಮನವಿಟ್ಟು ಆಲಿಸುತ್ತಿದ್ದನು, ಕೇಳುತ್ತಿದ್ದನು. ಪ್ರವಾದಿವರ್ಯರಎಸಐ ನುಡಿಗಳನ್ನು ನೆನಪಿನಲ್ಲಿಟ್ಟು ಕೊಳ್ಳುತ್ತಿದ್ದನು. ಪ್ರವಾದಿವರ್ಯರು(ಸ) ಹೇಳುವ ಕೆಲಸವನ್ನೆಲ್ಲ ಆಸಕ್ತಿಯಿಂದ ಮಾಡುತ್ತಿದ್ದನು. ಯಾವಾಗಲೂ ಪ್ರವಾದಿವರ್ಯರ(ಸ) ಆಜ್ಞೆಗೆ ಕಾಯುತ್ತಿದ್ದನು. ಬಹಳ ಗಮನಕೊಟ್ಟು ಪ್ರವಾದಿವರ್ಯರ(ಸ) ಆಜ್ಞೆಯನ್ನು ಆಲಿಸುತ್ತಿದ್ದನು. ಅಲ್ಲದೆ ಬಹಳ ಬುದ್ಧಿವಂತಿಕೆಯಿಂದ ಪ್ರವಾದಿವರ್ಯರ(ಸ) ಕಾರ್ಯ ನಿರ್ವಹಿಸುತ್ತಿದ್ದನು.

ಆ ಬಾಲಕ ಪ್ರವಾದಿವರ್ಯರ(ಸ) ಒಬ್ಬ ವಿಧೇಯ ಆಜ್ಞಾಪಾಲಕನೆಂದು ಪ್ರಸಿದ್ಧಿ ಪಡೆದನು. ಸ್ವಯಂ ಪ್ರವಾದಿವರ್ಯರು(ಸ) ಸಹ ಹಾಗೇ ತಿಳಿಯುತ್ತಿದ್ದರು. ಆದುದರಿಂದ ಪ್ರವಾದಿಯವರು(ಸ) ಹಾಸ್ಯ ಪೂರ್ಣವಾಗಿ ಆತನನ್ನು, "ಓ ಎರಡು ಕಿವಿಯವನೇ!" ಎಂದು ಕರೆದರು. ಇದರರ್ಥ 'ಓ ಆಜ್ಞೆಯನ್ನು ಪಾಲಿಸುವವನೇ' ಎಂದಾಗಿತ್ತು. ಆದರೆ, ಯಾರು ಪ್ರವಾದಿವರ್ಯರ(ಸ) ಈ ಹಾಸ್ಯದ ಮಾತು ಕೇಳಿದರೋ, ಅವರು ಅದನ್ನು ನಕ್ಕರು. ಏಕೆಂದರೆ ಎಲ್ಲರಿಗೂ ಎರಡು ಕಿವಿಗಳು ಇರುತ್ತವೆ.

ಯಾವ ಬಾಲಕನ ಜೊತೆ ಪ್ರವಾದಿವರ್ಯರು(ಸ) ಹೀಗೆ ಹಾಸ್ಯದ ಮಾತನ ಡಿದ್ದರೋ ಆತನೇ ಮುಂದೆ ಒಬ್ಬ ದೊಡ್ಡ ವಿದ್ವಾಂಸನಾದನು. ಇಂದು ನಾಷ ಆ ಅದೃಷ್ಟವಂತ ಬಾಲಕನ ಹೆಸರು ಅತ್ಯಂತ ಗೌರವದಿಂದ ತೆಗೆದುಕೊಳ್ಳುತ್ತೇ 'ಹ. ಅನಸ್(ರ)'. ಅಲ್ಲಾಹ್ ಅವರಿಂದ ಸಂತುಷ್ಟಗೊಳ್ಳಲಿ.

ಒಂದು ಸಲ ಪ್ರವಾದಿವರ್ಯರು(ಸ) ಅನಸ್‌ರನ್ನು(ರ) ಒಂದು ಕೆಲಸಕ್ಕಾ ಕಳುಹಿಸಿದ್ದರು. ಅಲ್ಲಿ ಹ. ಅನಸ್‌ರಿಗೆ ತಡವಾಯಿತು. ಅವರ ತಾಯಿಗೆ ತಿಳಿ ನಂತರ ಅವರು ಕೇಳಿದರು, "ಏಕೆ ತಡವಾಯಿತು. ಅಂತಹ ಕೆಲಸವಾದರೂ ಏನಿತ್ತು?" ಹ. ಅನಸ್ ಬಾಲಕನಾಗಿದ್ದರೂ ಬಹಳ ಬುದ್ಧಿವಂತಿಕೆಯಿಂದ ಉತ್ತರಿಸಿದರು ಅವರ ತಾಯಿಯೂ ಅದನ್ನು ಮೆಚ್ಚಿದರು. ಹ. ಅನಸ್ ಹೇಳಿದರು, "ದೇವನಾಣೆ ಅಮ್ಮಾ ಅದು ಪ್ರವಾದಿವರ್ಯರ(ಸ) ಒಂದು ರಹಸ್ಯವಾಗಿದೆ. ನಾನು ಅದನ್ನ ಎಂದೂ ಹೇಳಲಾರೆ, ಅಮ್ಮಾ! ನಿನಗೂ ಹೇಳಲಾರೆ. ಏಕೆಂದರೆ ಪ್ರೀತಿಯ ಪ್ರವಾದಿ(ಸ) ಅದನ್ನು ಗೌಪ್ಯವಾಗಿಡಲು ಹೇಳಿರುತ್ತಾರೆ."

ಇದನ್ನು ಕೇಳಿದ ಅವರ ತಾಯಿ, ಮಗನನ್ನು ತುಂಬಾ ಹೊಗಳಿದರು ಮತ್ತು ಹೇಳಿದರು, "ಹೇಳಬೇಡ ಮಗೂ! ನನಗೂ ಹೇಳಬೇಡ. ಅದು ಅಲ್ಲಾಹನ ಪ್ರವಾದಿಯ ರಹಸ್ಯವಾಗಿದೆ."

ಹ. ಅನಸ್(ರ) ಬೆಳೆದು ದೊಡ್ಡ ವ್ಯಕ್ತಿಯಾದರು. ಬಾಲ್ಯದಲ್ಲಿಯೂ ಬಹಳ ಬುದ್ಧಿವಂತರಾಗಿದ್ದರು ಮತ್ತು ದೊಡ್ಡವರಾಗಿಯೂ ಸಹ ಪ್ರವಾದಿವರ್ಯರನ್ನು(ಸ) ಸಂತುಷ್ಟವಾಗಿಸಿದ್ದರು. ಅಲ್ಲಾಹನು ಅವರಿಂದ ಸಂತುಷ್ಟಗೊಳ್ಳಲಿ.

# ಹ. ಅಬ್ದುಲ್ಲಾ ಬಿನ್ ಝುಬೈರ್(ರ)ರ ಬಾಲ್ಯ

ಹ. ಅಬ್ದುಲ್ಲಾ ಬಿನ್ ಝುಬೈರ್(ರ) ಪ್ರಿಯ ಪ್ರವಾದಿ(ಸ) ಅವರ ಅತ್ಯಂತ ಎಳೆ ವಯಸ್ಸಿನ ಸಂಗಾತಿಯಾಗಿದ್ದರು. ಅವರು ಪ್ರವಾದಿವರ್ಯರ(ಸ) ಒಬ್ಬ ಹಿರಿಯ ಸಂಗಾತಿಯಾದ ಹ. ಝುಬೈರ್‌ರ ಮಗನಾಗಿದ್ದರು. ಹ. ಅಬೂಬಕರ್‌ರ(ರ) ಮಗಳ ಮಗ, ಹ. ಆಯಿಶಾರ(ರ) ಸೋದರಿ ಪುತ್ರ ಹ. ಖದೀಜಾರ(ರ) ಸೋದರ ಮಗ ಮತ್ತು ಹ. ಸಫಿಯ್ಯಾರ[ಪ್ರವಾದಿವರ್ಯರ(ಸ) ಅತ್ತೆ] ಮೊಮ್ಮಗನಾಗಿದ್ದರು. ಹಂಝಾರವರು [ಪ್ರವಾದಿವರ್ಯರ(ಸ) ಚಿಕ್ಕಪ್ಪ] ಸಹ ಅವರ ಹಿರಿಯರಲ್ಲೊಬ್ಬರಾಗಿದ್ದರು. ತಾಯಿಯ ಹೆಸರು ಹ. ಅಸ್ಮಾ(ರ) ಎಂದಾಗಿತ್ತು. ಅವರು ಅಬೂಬಕರ್‌ರ ಹಿರಿಯ ಮಗಳಾಗಿದ್ದರು. ಅಬ್ದುಲ್ಲಾ ಬಿನ್ ಝುಬೈರ್‌ರ ಮನೆಯವರ ಮೂರು ವಿಷಯಗಳು ಬಹಳ ಪ್ರಸಿದ್ಧವಾಗಿವೆ.

1. ಅಲ್ಲಾಹನ ಹೊರತು ಮತ್ಯಾರಿಗೂ ಅಂಜುತ್ತಿರಲಿಲ್ಲ.

2. ಪ್ರವಾದಿಯವರಿಗಾಗಿ(ಸ) ತಮ್ಮ ಪ್ರಾಣವನ್ನೇ ತ್ಯಾಗ ಮಾಡಲು ಎಂದೆಂದಿಗೂ ಸಿದ್ಧರಿರುತ್ತಿದ್ದರು.

3. ಸತ್ಯವನ್ನು ನುಡಿಯಲು ಕಿಂಚಿತ್ತೂ ಹಿಂಜರಿಯುತ್ತಿರಲಿಲ್ಲ.

ಈ ಮೂರು ವಿಷಯಗಳು ಅಬ್ದುಲ್ಲಾ ಬಿನ್ ಝುಬೈರ್‌ರಲ್ಲಿಯೂ ಇದ್ದವು. ಅವರು ತನ್ನ ಕಾಲದ ಒಬ್ಬ ಮಹಾ ಧರ್ಮನಿಷ್ಠ, ಶೂರ ಮತ್ತು ವಾಗ್ಮಿಯಾಗಿದ್ದರು. ಆ ಕಾಲದ ಒಬ್ಬ ಪ್ರಸಿದ್ಧ ಶೂರ ವ್ಯಕ್ತಿಯಾದ ಮುಹ್ಲಬ್‌ರಲ್ಲಿ ಯಾರೋ ಈ ಕಾಲದ ಮಹಾ ಶೂರರ ಬಗ್ಗೆ ಕೇಳಿದಾಗ ಆತ ಮೂವರ ಹೆಸರುಗಳನ್ನು ಹೇಳಿದನು. ಅವುಗಳಲ್ಲಿ ಹ. ಝುಬೈರ್‌ರ ಹೆಸರಿರಲಿಲ್ಲ. ಕೇಳಿದ ವ್ಯಕ್ತಿಯು ಅತ್ಯಂತ ವಿಸ್ಮಯದಿಂದ ಹೇಳಿದ, "ಅಬ್ದುಲ್ಲಾ ಬಿನ್ ಝುಬೈರ್?" ಮುಹ್ಲಬ್ ಹೇಳಿದ, "ಮೂರ್ಖ! ನಾನು ಮನುಷ್ಯರ ಬಗ್ಗೆ ತಿಳಿಸುತ್ತಿದ್ದೇನೆ. ನೀನು ಪಶುವಿನ ಬಗ್ಗೆ ಕೇಳುತ್ತಿರುವಿ."

ಮುಹ್ಲಬ್‌ನ ಈ ಮಾತುಗಳಿಂದ ತಿಳಿದು ಬರುವುದೇನೆಂದರೆ, ಆ ಕಾಲದಲ್ಲಿ

ಹ. ಅಬ್ದುಲ್ಲಾ ಬಿನ್ ಝುಬೈರ್‌ರನ್ನು ಜನರು ಓರ್ವ ನಿರ್ಭಯ ಹಾಗೂ ಮಹಾ ಶೂರನೆಂದು ತಿಳಿಯುತ್ತಿದ್ದರು. ಅವರು ಪ್ರಸಿದ್ಧ ಖಲೀಫಾ ಯಝೀದ್‌ನ ಎದುರಾಗಿ ತನ್ನದೇ ಒಂದು ಆಡಳಿತವನ್ನು ಸ್ಥಾಪಿಸಿಕೊಂಡಿದ್ದರು. ಅಂತಹ ಅಬ್ದುಲ್ಲಾ ಬಿನ್ ಝುಬೈರ್‌ರ ಬಾಲ್ಯದ ಬಗ್ಗೆ ಓದಿರಿ ಮತ್ತು ಹಾಗೆಯೇ ಆಗಲು ಪ್ರಯತ್ನಿಸಿರಿ.

ಅಬ್ದುಲ್ಲಾ ಬಿನ್ ಝುಬೈರ್ ಮದೀನಾದಲ್ಲಿ ಜನಿಸಿದರು. ಅವರ ಜನ್ಮ ದಿನದಂದು ಎಲ್ಲ ಮುಸ್ಲಿಮರು ಹರ್ಷಿತರಾದರು. ಪ್ರಿಯ ಪ್ರವಾದಿ ಒಂದು ಖರ್ಜೂರ ವನ್ನು ತಮ್ಮ ಬಾಯಿಯಲ್ಲಿ ಜಗಿದು ಅದರ ರಸವನ್ನು ಮಗುವಿನ ಬಾಯಿಯಲ್ಲಿ ಹಾಕಿದರು. ಅಬ್ದುಲ್ಲಾ ಬಿನ್ ಝುಬೈರ್ ಈ ಜಗತ್ತಿಗೆ ಆಗಮಿಸಿದ ಕೂಡಲೇ ಇದು ಅವರಿಗೆ ದೊರಕಿದ ಪ್ರಪ್ರಥಮ ಅನುಗ್ರಹವಾಗಿತ್ತು. ಎಷ್ಟು ಅದೃಷ್ಟವಂತರಾಗಿದ್ದರವರು! ಅವರ ಬಾಲ್ಯದ ಘಟನೆಗಳು ಬಹಳ ಸ್ವಾರಸ್ಯಕರವಾಗಿವೆ.

ಒಂದು ಸಲ ಅಬ್ದುಲ್ಲಾ ಬಿನ್ ಝುಬೈರ್(ರ) ಮಕ್ಕಳೊಂದಿಗೆ ಆಟವಾಡುತ್ತಿದ್ದರು. ಅಷ್ಟರಲ್ಲಿಯೇ ಒಬ್ಬನು ಅಲ್ಲಿಗೆ ಬಂದನು. ಆತ ಚೀರಾಡಿ ಮಕ್ಕಳನ್ನು ಹೆದರಿಸಿದನು. ಮಕ್ಕಳು ಅಂಜಿ ಓಡಿದರು. ಆದರೆ ಅಬ್ದುಲ್ಲಾ ಬಿನ್ ಝುಬೈರ್ ಸಂಭಾಳಿಸಿಕೊಂಡು ಮರಳಿ ಬಂದರು ಮತ್ತು ಸಂಗಾತಿಗಳನ್ನು ಕರೆದು, "ಗೆಳೆಯರೇ! ಅಂಜಬೇಡಿ, ನನ್ನನು ನಿಮ್ಮ ಸರದಾರರನ್ನಾಗಿ ಮಾಡಿ. ಅವನ ಮೇಲೆ ಆಕ್ರಮಣ ಮಾಡೋಣ" ಎಂದರು.

ಅವರ ಧ್ವನಿಯನ್ನು ಕೇಳಿ ಹುಡುಗರು ಮರಳಿ ಬಂದರು.

ಅಬ್ದುಲ್ಲಾ ಬಿನ್ ಝುಬೈರ್‌ರೊಂದಿಗೆ ಕೂಡಿ ಆ ವ್ಯಕ್ತಿಯ ಮೇಲೆ ಮುಗಿ ಬಿದ್ದು ಅವನನ್ನು ಓಡಿಸಿದರು.

ಒಮ್ಮೆ ಅಬ್ದುಲ್ಲಾ ಬಿನ್ ಝುಬೈರ್ ಮಕ್ಕಳೊಂದಿಗೆ ಆಡುತ್ತಿದ್ದಾಗ ಉಮರ್ ಫಾರೂಕ್‌ರವರು ಅಲ್ಲಿಂದ ಹಾದು ಹೋಗುತ್ತಿದ್ದರು. ಉಮರ್‌ರ ಗಾಂಭೀರ್ಯತೆಯ ಪ್ರಭಾವ ಎಲ್ಲರ ಮೇಲೆ ಬಿತ್ತು. ಹುಡುಗರು ಅವರನ್ನು ನೋಡಿ ಓಡಿದರು. ಆದರೆ ಅಬ್ದುಲ್ಲಾ ಬಿನ್ ಝುಬೈರ್ ಹಾಗೆಯೇ ನಿಂತುಕೊಂಡರು. "ನೀನೇಕೆ ಓಡಲಿಲ್ಲ?" ಎಂದು ಹ. ಉಮರ್ ಕೇಳಿದರು. ಬಹಳ ಠೀವಿಯಿಂದ ಅಬ್ದುಲ್ಲಾ ಬಿನ್ ಝುಬೈರ್ ಉತ್ತರಿಸಿದರು, "ನಾನೇಕೆ ಓಡಲಿ? ನಾನೇನೂ ತಪ್ಪು ಮಾಡಿಲ್ಲವಲ್ಲ. ಅಲ್ಲದೆ ನಿಮಗೆ ಹೋಗಲು ರಸ್ತೆಯೂ ಅಗಲ ಕಡಿಮೆ ಇರಲಿಲ್ಲವಲ್ಲ."

ಉತ್ತರವನ್ನು ಕೇಳಿದ ಉಮರ್ ಮಂದಹಾಸ ಬೀರುತ್ತಾ ಮುಂದೆ ಸಾಗಿದರು.

ಹ. ಅಬ್ದುಲ್ಲಾ ಬಿನ್ ಝುಬೈರ್ ಐದಾರು ವರ್ಷದವರಾಗಿದ್ದಾಗ ಹತ್ತು ಸಾವಿರ

ಸ್ಲಾಮಿನ ಶತ್ರುಗಳು ಒಗ್ಗೂಡಿ ಮದೀನಾದ ಮೇಲೆ ದಂಡೆತ್ತಿ ಬಂದರು. ಆದರೆ ಲ್ಲಾಹನ ಅನುಗ್ರಹದಿಂದ ಮುಸ್ಲಿಮರು, ಪ್ರವಾದಿವರ್ಯರ(ಸ) ಜೊತೆಗೂಡಿ ಲ್ಲರನ್ನೂ ಹಿಮ್ಮೆಟ್ಟಿಸಿದರು. ಈ ಸತ್ಯನಿಷೇಧಿಗಳ ಜೊತೆ ಮುಸ್ಲಿಮರ ಕದನದ ಲದಲ್ಲಿ ಅಬ್ದುಲ್ಲಾ ಬಿನ್ ಝುಬೈರ್‌ರವರು ತಮ್ಮ ಗೆಳೆಯರೊಂದಿಗೆ ಒಂದು ಎಣ್ಣಿನ ಗುಡ್ಡೆಯ ಮೇಲೆ ನಿಂತುಕೊಂಡು ಕದನದ ತಮಾಷೆಯನ್ನು ನೋಡಿ ಂಜಿಸುತ್ತಿದ್ದರು. "ಅಲ್ಲಿ ನೋಡು, ಬಾಣ ಅಲ್ಲಿ ಬಂದು ಬಿದ್ದಿತು" ಎಂದು ಪರಸ್ಪರ ೇಳುತ್ತಿದ್ದರು.

ಅವರ ಈ ಶೌರ್ಯ ಮತ್ತು ನಿರ್ಭಯತೆಯನ್ನು ನೋಡಿದ ಅವರ ತಂದೆ ವರನ್ನು ಪ್ರವಾದಿವರ್ಯರ(ಸ) ಹತ್ತಿರ ಕರೆ ತಂದರು. ಅಬ್ದುಲ್ಲಾ ಬಿನ್ ಝುಬೈರ್‌ರಿಗೆ ಆಗ ಏಳು ವರ್ಷ ವಯಸ್ಸಾಗಿತ್ತು. ಪ್ರವಾದಿವರ್ಯರು(ಸ) ಈ ಮುಗ್ಧ ೂರ ಬಾಲಕನನ್ನು ನೋಡಿ ಮುಗುಳ್ನಕ್ಕರು ಮತ್ತು ಈ ಎಳೆ ವಯಸ್ಸಿನ ಮುಸ್ಲಿಮ ಂದ ವಿಧೇಯತೆಯ ಪ್ರಮಾಣವನ್ನು (ಬೈಅತ್) ಪಡೆದರು. ಅಂದಿನಿಂದಲೇ ಬ್ದುಲ್ಲಾ ಬಿನ್ ಝುಬೈರ್ ಪ್ರವಾದಿವರ್ಯರ(ಸ) ಕಡೆ ಬರ ತೊಡಗಿದರು. ವಾದಿವರ್ಯರ(ಸ) ನಂತರ ಆಯಿಶಾರವರು(ರ) ಅವರನ್ನು ತಮ್ಮ ಹತ್ತಿರ ಇಟ್ಟು ೂಂಡರು. ಅಬ್ದುಲ್ಲಾ ಬಿನ್ ಝುಬೈರ್‌ರವರು ಆಯಿಶಾರಿಂದಲೇ ಧರ್ಮದ ಜ್ಞಾನವನ್ನು ಕಲಿತರು. ಈ ಕಾರಣದಿಂದಲೇ ಅಬ್ದುಲ್ಲಾ ಬಿನ್ ಝುಬೈರ್‌ರವರು ವಾದಿವರ್ಯರಂತೆಯೇ(ಸ) ಎಲ್ಲವನ್ನೂ ಹೇಳುತ್ತಿದ್ದರು. ಆ ಸಮಯದಲ್ಲಿದ್ದ ರಿಯ ಸಹಾಬಿಗಳು ಅವರ ಧರ್ಮಪ್ರಜ್ಞೆಯನ್ನು ಹೊಗಳುತ್ತಿದ್ದರು. ಅಬ್ದುಲ್ಲಾ ಬಿನ್ ಬ್ಬಾಸ್ ಹೇಳುತ್ತಿದ್ದರು. "ಜನರೇ! ನೀವು ಪ್ರವಾದಿವರ್ಯರ(ಸ) ನಮಾಝನ್ನು ೂಡ ಬಯಸಿದರೆ, ಇಬ್ನ್ ಝುಬೈರ್‌ರ ನಮಾಝನ್ನು ಅನುಕರಿಸಿರಿ."

ಅಮ್ರ್ ಬಿನ್ ದೀನಾರ್ ಹೇಳುತ್ತಾರೆ "ಅಬ್ದುಲ್ಲಾರಿಗಿಂತ ಅತ್ಯುತ್ತಮವಾಗಿ ಮಾಝ್ ನಿರ್ವಹಿಸುವವರನ್ನು ನಾನು ನೋಡಿಲ್ಲ."

ಅಬ್ದುಲ್ಲಾ ಬಿನ್ ಝುಬೈರ್‌ರನ್ನು ಒಳ್ಳೆಯ ನಮಾಝ್ ನಿರ್ವಹಿಸುವವ, ಉಪವಾಸ ವ್ರತ ಆಚರಿಸುವವ ಮತ್ತು ಒಳ್ಳೆಯ ಸಂಬಂಧಿಕನೆಂದು ಅವರು ೇಳುತ್ತಿದ್ದರು.

❖ ❖ ❖ ❖

# ಖಲೀಫಾ ಉಮರ್ ಬಿನ್ ಅಬ್ದುಲ್ ಅಝೀಝ್(ರ)ರ ಬಾಲ್ಯ

ಉಮರ್ ಬಿನ್ ಅಬ್ದುಲ್ ಅಝೀಝ್(ರ) ಒಬ್ಬ ಪ್ರಸಿದ್ಧ ಖಲೀಫರಾಗಿದ್ದರು ಅವರು ಎಷ್ಟು ಒಳ್ಳೆಯವರಾಗಿದ್ದರೆಂದರೆ, ಜನರು ಅವರನ್ನು 'ಖಲೀಫಾ ರಾಶಿದ್' ಎನ್ನುತ್ತಿದ್ದರು. ಖಲೀಫಾ ರಾಶಿದ್ ಎಂದರೆ ಇಸ್ಲಾಮೀ ಆಡಳಿತವನ್ನು ಅಲ್ಲಾಹ ಮತ್ತು ಅಲ್ಲಾಹನ ಪ್ರವಾದಿಯ ಆಜ್ಞೆಗಳಂತೆ ನಡೆಸಿದವರು. ಉಮರ್ ಬಿನ್ ಅಬ್ದುಲ ಅಝೀಝ್ ಕೂಡ ಅಲ್ಲಾಹನ ಮತ್ತು ಪ್ರವಾದಿಯ ಆಜ್ಞೆಯಂತೆ ನಡೆದು ತೋರಿಸಿ ದವರು. ಅವರ ಆಡಳಿತಾವಧಿಯಲ್ಲಿ ಇಸ್ಲಾಮೀ ಸಾಮ್ರಾಜ್ಯವು ಸಾಕಷ್ಟು ಅಭಿವೃದ್ಧಿ ಪಡೆಯಿತು. ಅವರ ಬಾಲ್ಯದ ಒಂದು ಘಟನೆ ಗ್ರಂಥಗಳಲ್ಲಿ ಲಭ್ಯವಿದೆ. ಅದು ಸ್ವಾರಸ್ಯಕರವೂ ಪಾಠಬೋಧಕವೂ ಆಗಿದೆ.

ಅವರ ತಂದೆ ಅಬ್ದುಲ್ ಅಝೀಝ್ ಬಿನ್ ಮರ್‌ವಾನ್ (ಈಜಿಪ್ಟಿನ ರಾಜ್ಯಪಾಲ) ಅವರನ್ನು ಜ್ಞಾನಾರ್ಜನೆಗಾಗಿ ಮದೀನಾಕ್ಕೆ ಕಳುಹಿಸಿಕೊಟ್ಟಿದ್ದರು ಉಮರ್ ಬಿನ್ ಅಬ್ದುಲ್ ಅಝೀಝ್‌ರವರು(ರ) ಅಲ್ಲಿನ ಸುಪ್ರಸಿದ್ಧ ವಿದ್ವಾಂಸರಾಗಿದ್ದ ಸ್ವಾಲಿಹ್ ಬಿನ್ ಕೈಸಾನ್‌ರ ಮೇಲ್ವಿಚಾರಣೆಯಲ್ಲಿ ಶಿಕ್ಷಣ ಪಡೆಯುತ್ತಿದ್ದರು ಮತ್ತು ತನ್ನ ಸೋದರ ಮಾವ ಅಬ್ದುಲ್ಲಾ ಬಿನ್ ಉಮರ್‌ರ(ರ) ಮನೆಯಲ್ಲಿ ಇರುತ್ತಿದ್ದರು ಹ. ಸ್ವಾಲಿಹ್ ಬಿನ್ ಕೈಸಾನ್‌ರು ಅವರಿಗೆ ಬಹಳ ಜವಾಬ್ದಾರಿಕೆಯಿಂದ ವಿದ್ಯಾಭ್ಯಾಸ ನೀಡಿದರೆಂಬುದಕ್ಕೆ ಈ ಕೆಳಗಿನ ಘಟನೆಯೇ ಸಾಕ್ಷಿ.

ಒಂದು ಸಲ ಉಮರ್ ಬಿನ್ ಅಬ್ದುಲ್ ಅಝೀಝ್‌ರವರು(ರ) ನಮಾಝು ನಿರ್ವಹಿಸಲು ತಡಮಾಡಿದರು. ಸ್ವಾಲಿಹ್ ಬಿನ್ ಕೈಸಾನ್ ವಿಳಂಬಕ್ಕೆ ಕಾರಣ ಕೇಳಿದಾಗ ಅವರು ಹೇಳಿದರು, "ತಲೆಗೂದಲು ಸರಿಪಡಿಸುತ್ತಿದ್ದೆ. ಆದ್ದರಿಂದ ತಡವಾಯಿತು." ಇದನ್ನು ಕೇಳಿ ಸ್ವಾಲಿಹ್ ಬಿನ್ ಕೈಸಾನ್ "ಹೌದಾ? ತಲೆಗೂದಲನ್ನು ಶೃಂಗರಿಸುವುದು ನಮಾಝ್‌ಗಿಂತ ದೊಡ್ಡ ಕೆಲಸವಾಗಿಬಿಟ್ಟಿತೇ" ಎಂದು

ಕೋಪದಿಂದ ಕೇಳಿದರು. ಹ. ಸ್ವಾಲಿಹ್ ತಡಮಾಡದೆ ಅಬ್ದುಲ್ ಅಝೀಝ್‌ರಿಗೆ (ರಾಜ್ಯಪಾಲ) ಪತ್ರ ಬರೆದರು. ಅಲ್ಲಿಂದ ಒಬ್ಬ ವ್ಯಕ್ತಿ ಬಂದನು. ಆತ ತಡ ಮಾಡದೆ ಉಮರ್ ಬಿನ್ ಅಬ್ದುಲ್ ಅಝೀಝ್‌ರ(ರ) ತಲೆಯನ್ನು ಬೋಳಿಸಿ ಬಿಟ್ಟನು. ಉಮರ್ ಬಿನ್ ಅಬ್ದುಲ್ ಅಝೀಝ್(ರ) ಈ ರೀತಿಯಾಗಿ ಶಿಕ್ಷಣ ಪಡೆದಿದ್ದರು. ಈ ಶಿಕ್ಷಣ ಮತ್ತು ತರಬೇತಿಯ ಪರಿಣಾಮದಿಂದಲೇ ಅಲ್ಲಾಹನು ಅವರಿಗೆ ಖಲೀಫ ರಾಶಿದ್ ಎಂಬ ಬಿರುದನ್ನು ದಯಪಾಲಿಸಿದನು. ಅಲ್ಲಾಹನು ಅವರನ್ನು ಕರುಣಿಸಲಿ.

# ಇಮಾಮ್ ಅಬೂ ಹನೀಫಾ(ರ)ರ ಬಾಲ್ಯ

ಇರಾಕ್ ಎಂಬ ಒಂದು ದೇಶವಿದೆ. ಅಲ್ಲೊಂದು ನದಿ ಇದೆ. ಅದರ ಹೆಸರು ಯೂಫ್ರಟಿಸ್. ಈ ನದಿಯ ದಡದಲ್ಲೊಂದು ನಗರವಿದೆ. ಅದರ ಹೆಸರು ಕೂಫಾ. ಪ್ರವಾದಿ ಮುಹಮ್ಮದ್‌ರ(ಸ) ನೂರು ವರ್ಷಗಳ ನಂತರ ಕೂಫಾದಲ್ಲಿ ಮಹಾನ್ ವಿದ್ವಾಂಸರು, ಪಂಡಿತರು ಆಗಿ ಹೋಗಿದ್ದಾರೆ. ಅದೇ ಕೂಫಾಕ್ಕೆ ಎಲ್ಲಿಂದಲೋ ಒಬ್ಬನು ಬಂದನು. ಆತ ಚೆನ್ನಾಗಿ ಕಲಿತವನಾಗಿದ್ದ. ಆದರೆ ಸತ್ಯವನ್ನು ನಿರಾಕರಿಸುವವನಾಗಿದ್ದ. ಅಲ್ಲದೆ ಇಸ್ಲಾಮಿನ ಬಗ್ಗೆ ಮನಸ್ಸಿನಲ್ಲಿಯೇ ದ್ವೇಷ ತುಂಬಿದ್ದ. ಮುಸ್ಲಿಮರ ದೇವವಿಶ್ವಾಸವು ಕ್ಷೀಣಿಸಬೇಕೆಂದು ತನ್ನ ಮಾತುಗಳಿಂದ ಆತ ಪ್ರಯತ್ನ ಮಾಡುತ್ತಿದ್ದ. ಹೀಗೆ ಆ ನಗರದಲ್ಲಿ ಸಾಕಷ್ಟು ಅಧರ್ಮದ ವಾತಾವರಣ ನಿರ್ಮಿಸಿದ.

ಈ ವ್ಯಕ್ತಿ ಕೂಫಾಕ್ಕೆ ಬಂದವನು ಅಲ್ಲಿನ ವಿದ್ವಾಂಸರಿಗೆ ಮೂರು ಪ್ರಶ್ನೆ ಕೇಳಿದನು. ಎಲ್ಲ ವಿದ್ವಾಂಸರೂ ಆತನ ಪ್ರಶ್ನೆಗಳಿಗೆ ಉತ್ತರಿಸಲು ಅಸಮರ್ಥರಾದರು. ಈಗ ಆತ ದಿನಾಲೂ ನಗರದ ಪೇಟೆಯ ಮಧ್ಯದಲ್ಲಿ ನಿಲ್ಲುತ್ತಿದ್ದ. ತನ್ನ ಪ್ರಶ್ನೆಗಳಿಗೆ ಯಾವ ಪಂಡಿತನೂ ಉತ್ತರಿಸಲಿಲ್ಲವೆಂದು ಜಂಬ ಕೊಚ್ಚಿಕೊಳ್ಳುತ್ತಿದ್ದ. ಮುಸ್ಲಿಮರಿಗೆ ಇದನ್ನು ಕೇಳಿ ಬಹಳ ದುಃಖವಾಗುತ್ತಿತ್ತು. ಕೊನೆಗೆ ಅಲ್ಲಾಹನು ಆ ಸತ್ಯನಿಷೇಧಿಯ ಬಾಯಿ ಮುಚ್ಚಲು ಒಬ್ಬ ಬುದ್ಧಿವಂತ ಬಾಲಕನನ್ನು ಕಳುಹಿಸಿಕೊಟ್ಟನು.

ಈ ವಿದ್ಯಾರ್ಥಿ ಓದಲು ಹೊರಟಿದ್ದನು. ಜಂಬ ಕೊಚ್ಚಿಕೊಳ್ಳುತ್ತಿದ್ದ ಆ ಸತ್ಯ ನಿಷೇಧಿಯನ್ನು ಕಂಡ ಬಾಲಕ ಅಲ್ಲಿಯೇ ನಿಂತುಕೊಂಡ. "ನಾನು ನಿನ್ನ ಪ್ರಶ್ನೆಗಳ ಉತ್ತರ ಹೇಳಬಲ್ಲೆ" ಎಂದು ಆತ ಅವನಿಗೆ ಹೇಳಿದ. ಈ ವಿದ್ಯಾರ್ಥಿಯನ್ನು ಕಂಡ ಜನರು ಎಲ್ಲ ಕಡೆಯಿಂದ ಬಂದು ಅಲ್ಲಿ ಜಮಾಯಿಸಿದರು, "ಏನಪ್ಪ? ನೀನು ಇವನ ಪ್ರಶ್ನೆಗಳಿಗೆ ಉತ್ತರ ನೀಡುವೆಯಾ?" ಎಂದು ಕೇಳಿದರು. ಆತ ಹೇಳಿದ, "ಅಲ್ಲಾಹನು ಬಯಸಿದರೆ ಉತ್ತರ ನೀಡುವೆ."

ಆ ಸತ್ಯನಿಷೇಧಿ ಮೊದಲನೆಯ ಪ್ರಶ್ನೆ, "ಹೇಳು, ಈ ಹೊತ್ತಿನಲ್ಲಿ ನಿನ್ನ ಅಲ್ಲಾಹ್

ಏನು ಮಾಡುತ್ತಿದ್ದಾನೆ?" ಪ್ರಶ್ನೆ ಆಲಿಸಿದ ಆ ವಿದ್ಯಾರ್ಥಿ ಆತನಿಗೆ ಹೇಳಿದ, "ಮಹಾಶಯರೇ! ಕೇಳುವವನಿಗಿಂತ ಉತ್ತರಿಸುವಾತನ ಸ್ಥಾನಮಾನ ದೊಡ್ಡದಿರುತ್ತದೆ. ಆದ್ದರಿಂದ ನೀವು ನಿಮ್ಮ ಸ್ಥಾನದಿಂದ ಕೆಳಗಿಳಿದು ಬನ್ನಿರಿ, ನಾನು ಅಲ್ಲಿ ನಿಲ್ಲುವೆನು. ಆಗ ನನ್ನ ಅಲ್ಲಾಹ್ ಏನು ಮಾಡುತ್ತಿದ್ದಾನೆಂಬುದನ್ನು ತಿಳಿಸುವೆ."

ವಿದ್ಯಾರ್ಥಿಯ ಮಾತು ಕೇಳಿದ ಆತ ಎತ್ತರದ ಸ್ಥಾನದಿಂದ ಕೆಳಗಿಳಿದು ಬಂದನು. ಆಗ ಆ ವಿದ್ಯಾರ್ಥಿಯು ಅಲ್ಲಿ ಹೋಗಿ ನಿಂತು ಕೊಂಡು ಜೋರಾಗಿ ಹೇಳಿದನು, "ಓ ಜನರೇ! ಸಾಕ್ಷಿಯಾಗಿರಿ, ನನ್ನ ಅಲ್ಲಾಹನು ಈ ಹೊತ್ತು ಒಬ್ಬ ಸತ್ಯನಿಷೇಧಿಯ ಸ್ಥಾನಮಾನವನ್ನು ಕಡಿಮೆಗೊಳಿಸಿ ಒಬ್ಬ ಮುಸ್ಲಿಮ್ ಬಾಲಕನ ಸ್ಥಾನಮಾನವನ್ನು ಹೆಚ್ಚಿಸುತ್ತಿದ್ದಾನೆ."

ಎಳೆ ಪ್ರಾಯದ ವಿದ್ಯಾರ್ಥಿಯ ಈ ಉತ್ತರವನ್ನು ಕೇಳಿದ ಜನರು ಸರ್ವ ಕಡೆಯಿಂದ 'ಭೇಷ್' ಅನ್ನತೊಡಗಿದರು, "ಇದು ಸತ್ಯವಾಗಿದೆ, ಇದು ಸತ್ಯವಾಗಿದೆ." ಎಂದು ಉದ್ಗರಿಸಿದರು. ಆ ಸತ್ಯನಿಷೇಧಿ ಈ ಉತ್ತರವನ್ನು ಕೇಳಿ ನಾಚಿಕೆಪಟ್ಟನು. ಈ ವೇಳೆ ಆತ ಕೆಳಗಿಳಿದು ನಿಂತುಕೊಂಡಿದ್ದ ಮತ್ತು ಆ ವಿದ್ಯಾರ್ಥಿ ಎತ್ತರದ ಸ್ಥಾನದಲ್ಲಿದ್ದನು. ಆ ವಿದ್ಯಾರ್ಥಿಯು ಆತನಿಗೆ ಕೇಳುತ್ತಿದ್ದ "ನಿನ್ನ ಎರಡನೆ ಪ್ರಶ್ನೆ ಏನು?"

ಆ ಸತ್ಯನಿಷೇಧಿ ಮತ್ತೊಂದು ಪ್ರಶ್ನೆ ಕೇಳಿದನು "ಹೇಳು, ದೇವನಿಗಿಂತ ಮೊದಲು ಏನಿತ್ತು?" ವಿದ್ಯಾರ್ಥಿ ಉತ್ತರಿಸಿದನು, "ಮಹಾಶಯರೇ! ಸ್ವಲ್ಪ ಒಂಭತ್ತರಿಂದ ಕೆಳಗೆ ಎಣಿಸುತ್ತಾ ಹೋಗಿರಿ." ಆತ ಈ ರೀತಿಯಾಗಿ ಎಣಿಸಲು ಆರಂಭಿಸಿದ "ಒಂಭತ್ತು, ಎಂಟು, ಏಳು, ಆರು, ಐದು, ನಾಲ್ಕು, ಮೂರು, ಎರಡು, ಒಂದು" ನಂತರ ಸುಮ್ಮನಾದನು. "ಮಹಾಶಯರೇ! ಯಾಕೆ ಸುಮ್ಮನಾದಿರಿ? ಎಣಿಸಿ, ಒಂದಕ್ಕಿಂತ ಮೊದಲು ಏನಿದೆ ಹೇಳಿ" ಎಂದು ಕೇಳಿದ ಆ ವಿದ್ಯಾರ್ಥಿ. ಆತ ಉತ್ತರಿಸಿದ, "ಒಂದಕ್ಕಿಂತ ಮೊದಲು ಯಾವ ಸಂಖ್ಯೆಯೂ ಇಲ್ಲ." ಆಗ ಆ ವಿದ್ಯಾರ್ಥಿ ಮುಗುಳ್ನಗುತ್ತಾ ಹೇಳಿದನು, "ಮಹಾಶಯರೇ, ಅಲ್ಲಾಹನು ಸಹ ಒಬ್ಬನಾಗಿದ್ದಾನೆ. ಈ ಒಬ್ಬ ಅಲ್ಲಾಹನಿಗಿಂತ ಮೊದಲು ಏನಾದರೂ ಇರಲಿಕ್ಕೆ ಸಾಧ್ಯವೆ?"

ವಿದ್ಯಾರ್ಥಿಯ ಈ ಉತ್ತರ ಕೇಳಿದ ಸತ್ಯನಿಷೇಧಿ ಕಕ್ಕಾಬಿಕ್ಕಿಯಾದನು. ತನ್ನ ಹಣೆಯ ಮೇಲಿನ ಬೆವರನ್ನು ಒರೆಸಿಕೊಳ್ಳತೊಡಗಿದನು. ಜನರು ಈ ಎಳೆ ವಯಸ್ಸಿನ ವಿದ್ಯಾರ್ಥಿಯ ಬುದ್ಧಿವಂತಿಕೆಯನ್ನು ನೋಡಿ ಆಶ್ಚರ್ಯ ಚಕಿತರಾದರು. ಸ್ವಲ್ಪ

ಸಮಯದ ನಂತರ ಆ ವಿದ್ಯಾರ್ಥಿಯು ಮತ್ತೆ ಆತನಿಗೆ ಕೇಳಿದನು, "ನಿಮ್ಮ ಮೂರನೆಯ ಪ್ರಶ್ನೆ ಯಾವುದು?" ಆತ ಕೇಳಿದ, "ದೇವನ ಮುಖ ಯಾವ ದಿಕ್ಕಿಗೆ ಇದೆ." ಈ ಪ್ರಶ್ನೆಯ ಉತ್ತರ ಹೇಳಲು ವಿದ್ಯಾರ್ಥಿಯು ಒಂದು ಮೇಣದ ಬತ್ತಿಯನ್ನು ತರಿಸಿದನು. ತದನಂತರ ಅದನ್ನು ಬೆಳಗಿಸಿದನು ಮತ್ತು ಆ ಸತ್ಯನಿಷೇಧಿಗೆ ಕೇಳಿದನು, "ಮಹಾಶಯರೇ! ಹೇಳಿ ಈ ಬೆಳಕಿನ ಮುಖ ಯಾವ ದಿಕ್ಕಿಗಿದೆ?" ಆತ ಹೇಳಿದ, "ಇದು ಚತುರ್ಮುಖವಾಗಿದೆ." ವಿದ್ಯಾರ್ಥಿ ಮೆಲು ದನಿಯಲ್ಲಿ ಹೇಳಿದ, "ಜನರೇ! ಸಾಕ್ಷಿಯಾಗಿರಿ, ಅಲ್ಲಾಹನೂ ಸಹ ಒಂದು ಜ್ಯೋತಿ ಅಂದರೆ ಬೆಳಕು ಆಗಿದ್ದಾನೆ. ಅವನೂ ಸಹ ಚತುರ್ಮುಖನಾಗಿದ್ದಾನೆ. ನಾಲ್ಕೂ ಕಡೆ ಆತ ನೋಡುತ್ತಿದ್ದಾನೆ. ಎಲ್ಲವೂ ಅವನ ದೃಷ್ಟಿಯಲ್ಲಿದೆ."

ಮೂರನೆಯ ಪ್ರಶ್ನೆಯ ಉತ್ತರವನ್ನು ಕೇಳಿದ ಆ ಸತ್ಯನಿಷೇಧಿಯ ಬಾಯಿ ಬಂದಾಗಿ ಬಿಟ್ಟಿತು. ಆತ ಅಲ್ಲಿಂದ ಅವಮಾನಿತನಾಗಿ ಕಾಲುಕಿತ್ತ. ಜನರೆಲ್ಲರೂ ಆ ವಿದ್ಯಾರ್ಥಿಯನ್ನು ಕೊಂಡಾಡಿದರು.

ಆ ವಿದ್ಯಾರ್ಥಿ ಯಾರಾಗಿದ್ದನು ಎಂಬುದು ನಿಮಗೆ ಗೊತ್ತಿದೆಯಾ? ಅವರೇ ಇಮಾಮ್ ಅಬೂ ಹನೀಫಾ. ದೊಡ್ಡವರಾಗಿ ಅವರು ಇಮಾಮ್ ಎನಿಸಿಕೊಂಡರು. ಜಗತ್ತಿನ ಎಲ್ಲ ಮುಸ್ಲಿಮರು ಅವರ ಹೆಸರನ್ನು ಬಹಳ ಗೌರವದಿಂದ ಸ್ಮರಿಸಿ ಕೊಳ್ಳುತ್ತಾರೆ. ಅಲ್ಲಾಹನು ನಮಗೆ ನಮ್ಮ ಹಿರಿಯರ ನುಡಿಗಳ ಮೇಲೆ ನಡೆಯುವ ಶಕ್ತಿ ನೀಡಲಿ.

# ಇಮಾಮ್ ಅಬೂಯೂಸುಫ್(ಅ)ರ ಬಾಲ್ಯ

ನೀವು ಓದು ಬರಹ ತಿಳಿದ ಯಾವನೇ ವ್ಯಕ್ತಿಯಲ್ಲಿ ಮಹಾನ್ ಇಮಾಮರುಗಳು ಯಾರೆಂದು ಕೇಳಿದರೆ, ಆತ ನಾಲ್ಕು ಮಂದಿ ಇಮಾಮರುಗಳ ಹೆಸರನ್ನು ಹೇಳು ತ್ತಿನೆ. 1. ಇಮಾಮ್ ಅಬೂ ಹನೀಫಾ 2. ಇಮಾಮ್ ಮಾಲಿಕ್ 3. ಇಮಾಮ್ ಶಾಫಿಈ 4. ಇಮಾಮ್ ಅಹ್ಮದ್ ಬಿನ್ ಹಂಬಲ್.

ಈ ನಾಲ್ವರು ಇಮಾಮರುಗಳಲ್ಲಿ ಇಮಾಮ್ ಅಬೂ ಹನೀಫಾರನ್ನು ಮಾಮ್ ಆಝುಮ್ (ಮಹಾನ್ ಇಮಾಮ್) ಎಂದು ಕರೆಯುತ್ತಾರೆ. ಅವರ ಬ್ಬರು ಶಿಷ್ಯರು ಬಹಳ ಪ್ರಸಿದ್ಧರಾದರು. ಒಬ್ಬರು ಇಮಾಮ್ ಮುಹಮ್ಮದ್(ರ). ನ್ನೊಬ್ಬರು ಇಮಾಮ್ ಅಬೂ ಯೂಸುಫ್(ರ). ಒಂದು ವೇಳೆ ಅಲ್ಲಾಹನು ಈ ಬ್ಬರು ಶಿಷ್ಯರನ್ನು ಹುಟ್ಟಿಸದೆ ಇರುತ್ತಿದ್ದರೆ ಇಂದು ಅಬೂ ಹನೀಫಾರ ಶಿಕ್ಷಣದಿಂದ ಯಾರೂ ಪರಿಚಿತರಾಗುತ್ತಿರಲಿಲ್ಲ. ಈ ಇಬ್ಬರು ಶಿಷ್ಯರು ಅಬೂ ಹನೀಫಾರಿಂದ ಲಿತದ್ದೆಲ್ಲವನ್ನು ಅತ್ಯಂತ ಸುವ್ಯವಸ್ಥಿತವಾಗಿ ಬರೆದು ಜಗತ್ತಿನ ಮುಂದೆ ಇಟ್ಟಿದ್ದರಿಂದಲೇ ಬೂ ಹನೀಫಾರವರು ಮಹಾನ್ ಇಮಾಮರೆನಿಸಿಕೊಂಡರು. ಇದರ ಮತ್ತೊಂದು ಾಭ ಏನಾಯಿತೆಂದರೆ, ಸಾಮಾನ್ಯ ಮುಸ್ಲಿಮರಿಗೆ ಧರ್ಮದ ಮೇಲೆ ನಡೆಯಲು ತ್ಯಂತ ಸುಲಭ ವಿಧಾನ ಸಿಕ್ಕಿತು. ಈ ಸುಲಭ ವಿಧಾನಕ್ಕೆ ಫಿಕ್ಹ್ ಹನಫಿ (ಹನಫೀ ರ್ಮಶಾಸ್ತ್ರ) ಎಂದು ಕರೆಯಲಾಗುತ್ತಿದೆ. ಹನಫೀ ಕರ್ಮಶಾಸ್ತ್ರವನ್ನು ಇಮಾಮ್ ುಹಮ್ಮದ್(ರ) ಹಾಗೂ ಇಮಾಮ್ ಅಬೂ ಯೂಸುಫ್‌ರವರೇ ಸಂಯೋಜಿಸಿದ್ದರು.

ಇಮಾಮ್ ಅಬೂ ಹನೀಫಾರ ಈ ಇಬ್ಬರು ಶಿಷ್ಯರಿಗೆ ಅಲ್ಲಾಹನು ಅತ್ಯುನ್ನತ ್ಥಾನವನ್ನು ನೀಡಿದ್ದನು. ಇವರಲ್ಲಿ ಇಮಾಮ್ ಅಬೂ ಯೂಸುಫ್‌ರ ಜ್ಞಾನದ ೀರ್ತಿಯನ್ನು ಅಂದಿನ ಬಾದಶಹ ಹಾರೂನ್ ರಶೀದ್ ಕೇಳಿ, ಅವರನ್ನು ತನ್ನ ೇಶದ ಮುಖ್ಯ ನ್ಯಾಯಾಧೀಶರನ್ನಾಗಿ ಮಾಡಿದರು. ಹಾರೂನ್ ರಶೀದ್ ಅವರನ್ನು ಹಳ ಗೌರವಿಸುತ್ತಿದ್ದರು. ಇಮಾಮ್ ಸಾಹೇಬರು, ಅವರಿಂದಾಗುವ ತಪ್ಪುಗಳನ್ನು

ಟೀಕಿಸುತ್ತಿದ್ದರು ಮತ್ತು ಅವರು ಸುಮ್ಮನಾಗುತ್ತಿದ್ದರು. ತಾನು ಊಟ ಮಾಡುವಾ
ಇಮಾಮರನ್ನು ಸಹ ತನ್ನ ಜೊತೆಗೆ ಊಟ ಮಾಡಿಸುತ್ತಿದ್ದರು. ಒಂದು ದಿ
ಹಾರೂನ್ ರಶೀದ್‌ರ ಮುಂದೆ ಪಿಸ್ತಾದಿಂದ ತಯಾರಾದ ಫಲೂದ (ಒಂದ
ಬಗೆಯ ಸಿಹಿ ತಿಂಡಿ) ಬಂದಿತು. ಅವರು ಅದನ್ನು ಇಮಾಮರ ಮುಂ
ಇರಿಸಿದರು. ಫಲೂದವನ್ನು ನೋಡಿ ಇಮಾಮರ ಕಣ್ಣುಗಳು ತೇವಗೊಂಡವ
ಬಾದಶಾಹನು ಕಾರಣ ಕೇಳಿದಾಗ ಇಮಾಮರು ತನ್ನ ಬಾಲ್ಯದ ಒಂದ
ಘಟನೆಯನ್ನು ಈ ರೀತಿಯಾಗಿ ವಿವರಿಸಿದರು

"ಕೂಫಾ ನಗರದಲ್ಲೊಬ್ಬ ಮುದುಕನಿದ್ದ. ಅವನ ಹೆಸರು ಇಬ್ರಾಹೀಮ
ಎಂದಾಗಿತ್ತು. ವೃದ್ಧ ಇಬ್ರಾಹೀಮ್ ಕೂಲಿ ಕೆಲಸ ಮಾಡುತ್ತಿದ್ದ. ವಯಸ್ಸಾಗಿದ್ದರಿಂ
ಕೂಲಿ ಕಡಿಮೆ ಸಿಗುತ್ತಿತ್ತು. ಈತನ ಹೆಂಡತಿ ಬಟ್ಟೆ ಹೊಲಿದು ಸಂಪಾದಿಸುತ್ತಿದ್ದಳ
ಮನೆಯಲ್ಲಿನ ಜನರ ಹೊಟ್ಟೆ ತುಂಬಿಸುವಷ್ಟು ಗಳಿಕೆ ಅವರಿಬ್ಬರಿಂದ ಆಗುತ್ತಿರಲಿ
ಪಾಪ! ಮುಂಜಾನೆ ಏನಾದರೂ ತಿಂದರೆ ಸಂಜೆ ಹಸಿದ ಹೊಟ್ಟೆಯಿಂ
ಮಲಗಿಕೊಳ್ಳುತ್ತಿದ್ದರು. ಸಂಜೆ ಏನಾದರೂ ತಿಂದರೆ, ಮುಂಜಾನೆ ತಿನ್ನದೆ ಕೆಲಸ
ತೆರಳುತ್ತಿದ್ದರು.

ಈ ಮುದುಕ ಇಬ್ರಾಹೀಮ್‌ರಿಗೆ ಒಬ್ಬ ಮಗನಿದ್ದನು. ಆತನ ಹೆಸ
ಯಅ್‌ಕೂಬ್ ಎಂದಾಗಿತ್ತು. ಯಅ್‌ಕೂಬ್ ಹತ್ತು ಹನ್ನೆರಡು ವರ್ಷದವನಾದಾ
ಅವನೂ ಸಹ ಮನೆಖರ್ಚಿಗಾಗಿ ಏನಾದರೂ ಗಳಿಸಿ ತರಬಹುದೆಂದು ಅವನ ತಂ
ಅವನನ್ನು ಎಲ್ಲಿಯಾದರೂ ಕೆಲಸಕ್ಕೆ ನಿಲ್ಲಿಸಬಯಸಿದನು.

ಈ ಮಾತು ಇಬ್ರಾಹೀಮ್ ತನ್ನ ಹೆಂಡತಿಗೆ ಹೇಳಿದರು. ಆಕೆ ಯಅ್‌ಕೂಬ್‌ನನ
ಕರೆದುಕೊಂಡು ಒಬ್ಬ ಅಗಸನ ಮನೆಗೆ ಹೋಗಿ ಅಲ್ಲಿ ಅವನನ್ನು ಕೆಲಸ
ನಿಲ್ಲಿಸಿದಳು. ಆದರೆ ಯಅ್‌ಕೂಬ್‌ನ ಮನಸ್ಸು ಕೆಲಸದಲ್ಲಿ ಆಸಕ್ತಿ ತೋರುತ್ತಿರಲಿ
ಅವನಿಗೆ ಜ್ಞಾನ ಸಂಪಾದನೆಯ ಆಸಕ್ತಿ ಇತ್ತು. ಪ್ರವಾದಿ ಮುಹಮ್ಮದ್‌ರು(ಸ) ಈ
ಜಗತ್ತಿನ ಜನರಿಗೆ ನೀಡಿದ ತತ್ವಗಳನ್ನು ಆತ ಕಲಿಯ ಬಯಸುತ್ತಿದ್ದ. ಅಲ್ಲಾಹ
ಆದೇಶಗಳನ್ನು ತಿಳಿದುಕೊಳ್ಳುವ ಮನಸ್ಸು ಅವನದ್ದಾಗಿತ್ತು. ಅದನ್ನು ತಿಳಿದುಕೊಂಡ
ವಿಶ್ವದಲ್ಲೆಲ್ಲ ಅದನ್ನು ಹರಡುವುದು ಅವನ ಬಯಕೆಯಾಗಿತ್ತು.

ಆದ್ದರಿಂದ ಯಅ್‌ಕೂಬ್ ಕೆಲಸದ ನೆಪದಲ್ಲಿ ಮನೆಯಿಂದ ಹೊರ ಬಂದ
ಒಂದು ಪಾಠಶಾಲೆಗೆ ತಲುಪುತ್ತಿದ್ದ. ಆ ಪಾಠ ಶಾಲೆಯಲ್ಲಿ ಒಬ್ಬ ಮಹಾ
ವಿದ್ವಾಂಸರು ಪಾಠ ಹೇಳುತ್ತಿದ್ದರು. ಅವರ ಹೆಸರು ಇಮಾಮ್ ಅಬೂ ಹನೀಫ

. ಅಬೂ ಹನೀಫಾರು ಆ ಕಾಲದ ಮಹಾನ್ ವಿದ್ವಾಂಸರಾಗಿದ್ದರು. ತನ್ನ
ಯಕೆಯಲ್ಲಿ ಮಗ್ನನಾದ ಯಅ್‌ಕೂಬ್ ಹ. ಅಬೂ ಹನೀಫಾರಿಂದ ಪಾಠ
ಳಿಸಿಕೊಳ್ಳುತ್ತಿದ್ದ. ಹೀಗೆಯೇ ಒಂದು ತಿಂಗಳು ಕಳೆಯಿತು. ತಂದೆ ತಾಯಿ ಇಬ್ಬರೂ
ವನಿಗೆ ತಿಂಗಳ ಮಜೂರಿ ತಂದು ಕೊಡಲು ಹೇಳಿದರು. ಯಅ್‌ಕೂಬ್ ಮಜೂರಿ
ಲ್ಲಿಂದ ತಂದು ಕೊಡಬೇಕು? ಆತ ಆ ಅಗಸನ ಹತ್ತಿರ ಕೆಲಸಕ್ಕೆ ಹೋಗುತ್ತಿದ್ದರೆ
ಾತ್ರ ಮಜೂರಿ ತರಬಹುದಿತ್ತು. ತಂದೆ ತಾಯಿಗಳಿಬ್ಬರೂ ಮೇಲಿಂದ ಮೇಲೆ
ಳಿದಾಗ ಮಗ ಇಮಾಮ್ ಅಬೂ ಹನೀಫಾರ ಪಾಠ ಶಾಲೆಗೆ ಕಲಿಯಲು
ೋಗುತ್ತಿದ್ದುದು ತಿಳಿಯಿತು.

ಇದನ್ನು ತಿಳಿದ ತಾಯಿ ಕೋಪಗೊಂಡಳು. ತನ್ನ ಮಗನನ್ನು ಕರೆದುಕೊಂಡು
ಾಠಶಾಲೆಗೆ ಹೋದಳು. ಇಮಾಮ್ ಅಬೂ ಹನೀಫಾರ ಹತ್ತಿರ ಹೀಗೆ ಹೇಳಿದಳು,
ಮಹಾಶಯರೇ! ಈತ ನನ್ನ ಮಗ, ನಾನು ಬಟ್ಟೆ ಹೊಲಿದು ಅಲ್ಪಸ್ವಲ್ಪ ಸಂಪಾದಿಸಿ
ವನನ್ನು ಸಾಕುತ್ತಿದ್ದೇನೆ. ಇವನನ್ನು ಏನಾದರೂ ಸಂಪಾದಿಸಲು ಒಬ್ಬ ಅಗಸನ
ನೆಯಲ್ಲಿ ಕೆಲಸಕ್ಕೆ ಸೇರಿಸಿದ್ದೆ. ಆದರೆ, ಈತ ನಿಮ್ಮ ಹತ್ತಿರ ಬರುತ್ತಿದ್ದಾನೆ. ಈತ
ದು ಬರಹ ಕಲಿತು ಏನು ಮಾಡುತ್ತಾನೆ? ಇವನಿಗೆ ಸ್ವಲ್ಪ ಬುದ್ಧಿ ಹೇಳಿ.
ನಾದರೂ ದುಡಿಮೆ ಮಾಡಿದರೆ ಜೀವನೋಪಾಯಕ್ಕೆ ಆಗಬಹುದು."

ಇದನ್ನು ಕೇಳಿದ ಇಮಾಮ್ ಅಬೂ ಹನೀಫಾರು ಮುಗುಳ್ನಗುತ್ತಾ ಹೇಳಿದರು,
ಈ ಹುಡುಗನನ್ನು ನನ್ನ ಹತ್ತಿರವೇ ಬಿಟ್ಟು ಹೋಗು. ನೀನು ಈತನಿಗೆ ಒಣಗಿದ
ೂಟ್ಟಿಯನ್ನು ತಿನ್ನಿಸಲು ಬಯಸುತ್ತಿರುವಿ, ಆದರೆ ಈತ ಪಿಸ್ತಾ ಎಣ್ಣೆಯಿಂದ
ದ್ಧಗೊಳಿಸಿದ ಫಲೂದ ತಿನ್ನಲು ಬಯಸುತ್ತಿದ್ದಾನೆ."

ಅಬೂ ಹನೀಫಾರ ಈ ಮಾತಿನ ಸಾರಾಂಶ ಇಷ್ಟೇ ಆಗಿತ್ತು, "ನೀನು
ತನನ್ನು ಸಣ್ಣ ವ್ಯಕ್ತಿಯನ್ನಾಗಿ ಮಾಡಿ, ಸ್ವಲ್ಪ ಸಂಪಾದನೆ ಮಾಡಿಸಿ, ಸಣ್ಣ ಕೆಲಸ
ಗೆದುಕೊಳ್ಳಲು ಬಯಸುತ್ತಿರುವಿ. ಆದರೆ, ಈತ ದೊಡ್ಡ ವ್ಯಕ್ತಿಯಾಗಿ ದೊಡ್ಡ ದೊಡ್ಡ
ಾರ್ಯಗಳನ್ನು ಮಾಡಲು ಇಚ್ಛಿಸುತ್ತಿದ್ದಾನೆ." ಆದರೆ ಆ ಮಹಿಳೆ ಇದನ್ನು ಅರ್ಥ
ಾಡಿಕೊಳ್ಳಲಿಲ್ಲ. ಆಕೆಗೆ ಬಹಳ ಸಿಟ್ಟು ಬಂದಿತ್ತು. ಈ ಮುದುಕನ ತಲೆ
ರಿಯಿಲ್ಲವೆಂದು ಬಡ ಬಡಿಸುತ್ತಾ ಅಲ್ಲಿಂದ ಹೊರಟು ಹೋದಳು.

ಇಮಾಮ್ ಅಬೂ ಹನೀಫಾರವರು ಆಕೆಯ ಮನೆಯ ಖರ್ಚಿನ ಎಲ್ಲ
ವಾಬ್ದಾರಿಯನ್ನು ತಾನೇ ವಹಿಸಿಕೊಂಡರು. ಇಮಾಮ್ ಸಾಹೇಬರ ವ್ಯಾಪಾರದಲ್ಲಿ
ಲ್ಲಾಹನು ಸಮೃದ್ಧಿಯುಂಟು ಮಾಡಿದ್ದನು. ಅವರು ಒಂದು ದೊಡ್ಡ ಮೊತ್ತವನ್ನು

ಯಅ್‌ಕೂಬನ ತಂದೆತಾಯಿಗಳಿಗೆ ನೀಡತೊಡಗಿದರು. ಈಗ ಯಅ್‌ಕೂಬ
ನಿಶ್ಚಿಂತೆಯಿಂದ ಓದು ಬರಹದಲ್ಲಿ ತೊಡಗಿದ. ಯಅ್‌ಕೂಬ್ ಬಹಳ ಶ್ರಮದಿಂ
ಅಭ್ಯಾಸ ಮಾಡುತ್ತಿದ್ದ. ಇಮಾಮರೂ ಸಹ ಬಹಳ ಆಸಕ್ತಿಯಿಂದ ವಿದ್ಯೆ ನೀಡಿದರು
ಇದರ ಪರಿಣಾಮದಿಂದ ಯಅ್‌ಕೂಬ್ ದೊಡ್ಡ ವಿದ್ವಾಂಸನಾದನು. ಅಬೂ
ಹನೀಫಾರವರೂ ಅವರನ್ನು ನಂಬತೊಡಗಿದರು. ತದನಂತರ ಇಮಾಮರು
ಪಾಠಶಾಲೆ ಮತ್ತು ತಮ್ಮ ಗ್ರಂಥಗಳೆಲ್ಲವನ್ನೂ ತಮ್ಮ ಶಿಷ್ಯರಿಗೆ ನೀಡಿದರು. ಅವರಲ್ಲಿ
ಯಅ್‌ಕೂಬನೂ ಒಬ್ಬನಾಗಿದ್ದನು. ಮುಂದೆ ಅವನು ಅಬೂ ಯೂಸುಫ್ ಎಂಬ
ಹೆಸರಿನಿಂದ ಪ್ರಸಿದ್ಧನಾದನು. ಅದೇ ಅಬೂ ಯೂಸುಫ್ ಇಂದು ನಿಮ್ಮ ಜೊತೆ
ಊಟ ಮಾಡಲು ಕುಳಿತುಕೊಂಡಿದ್ದಾನೆ. ಅವನ ಮುಂದೆ ತಾವು ಪಿಸ್ತಾ ಎಣ್ಣೆಯಿಂದ
ತಯಾರಾದ ಫಲೂದಾವನ್ನು ಇಟ್ಟಿದ್ದೀರಿ.

ಓ ಬಾದಶಹರೇ! ಈ ವೇಳೆ ನನಗೆ ಇಮಾಮ್ ಅಬೂ ಹನೀಫಾರವರು
ಅಂದು ನನ್ನ ತಾಯಿಯೊಡನೆ ಹೇಳಿದ ಮಾತುಗಳು ನೆನಪಾಗುತ್ತಿವೆ. ಇಂದು ನಾನು
ನನ್ನ ಕಣ್ಣುಗಳೆದುರು ಊಟದ ಹಾಸಿನ ಮೇಲೆ ಪಿಸ್ತಾ ಎಣ್ಣೆಯಿಂದ ತಯಾರಾದ
ಫಲೂದಾವನ್ನು ಪಡೆದುಕೊಂಡೆನು. ಇಮಾಮ್ ಆಝುಮ್‌ರ ಮೇಲೆ ಅಲ್ಲಾಹನ
ಕರುಣೆಯಾಗಲಿ, ಎಷ್ಟು ಸತ್ಯವಾಯಿತು ಅವರ ಭವಿಷ್ಯ ನುಡಿ.

ಇಮಾಮ್ ಅಬೂ ಯೂಸುಫ್ ನಡೆದ ಈ ಘಟನೆಯನ್ನು ವಿವರಿಸಿ
ಶಾಂತರಾದರು. ಹಾರೂನ್ ರಶೀದ್ ಸಂತೋಷಗೊಂಡರು ಮತ್ತು ಯಾರು ಈ
ಕಥೆ ಕೇಳಿದರೋ ಅವರೂ ಸಂತೋಷಗೊಂಡರು. ಅಲ್ಲಾಹನು ನಮಗೂ
ಇಂತಹದೇ ಜ್ಞಾನಾರ್ಜನೆಯ ಅಭಿರುಚಿ ನೀಡಲಿ.

# ಶೈಖ್ ಅಬ್ದುಲ್ ಕಾದಿರ್ ಜೀಲಾನಿಯವರ(ರ)ರ ಬಾಲ್ಯ

ಶೇಖ್ ಅಬ್ದುಲ್ ಕಾದಿರ್ ಜೀಲಾನಿ(ರ) ಒಬ್ಬ ಪ್ರಸಿದ್ಧ ಸಂತರಾಗಿ ಹೋಗಿದ್ದಾರೆ. ಜನರು ಅವರನ್ನು 'ಮಹಾನ್ ಸಂತ' ಎಂದು ಕರೆಯುತ್ತಾರೆ. ಈ ಮಹಾನ್ ಸಂತರು ನಿಜವಾಗಿ ಸುಶೀಲವಂತರಾಗಿದ್ದರು. ಅವರು ಧರ್ಮದ ಸಂಪೂರ್ಣ ಜ್ಞಾನವನ್ನು ಹೊಂದಿದ್ದರು. ಅಷ್ಟೇ ಅಲ್ಲ, ಅವರು ಧರ್ಮದ ಉಪದೇಶವನ್ನು ದೊಡ್ಡವರೂ ಸಣ್ಣವರೂ ತಿಳಿಯುವಂತೆ ಬೋಧಿಸುತ್ತಿದ್ದರು. ಅವರು ಇಸ್ಲಾಮಿನ ಉತ್ಕೃಷ್ಟ ಸೇವೆಯನ್ನು ಮಾಡಿದ್ದಾರೆ. ಆದ್ದರಿಂದ ಜಗತ್ತಿನ ಜನರೆಲ್ಲ ಅವರ ಹೆಸರನ್ನು ಬಹಳ ಗೌರವದಿಂದ ಸ್ಮರಿಸಲಾಗುತ್ತದೆ. ಶೇಖ್‌ರ ಹುಟ್ಟೂರು ಗೀಲಾನ್ ಎಂಬ ಗ್ರಾಮವಾಗಿತ್ತು. ಆದರೆ, ಅವರು ಬಗ್ದಾದ್‌ಗೆ ಹೋಗಿ ಅಲ್ಲಿನ ಮಹಾನ್ ವಿದ್ವಾಂಸರಿಂದ ವಿದ್ಯೆ ಕಲಿತರು. ಅವರ ಬಾಲ್ಯದ ಒಂದು ಘಟನೆ ಬಹಳ ಪ್ರಸಿದ್ಧವಾಗಿದೆ.

ಗ್ರಂಥಗಳಲ್ಲಿ ಅವರ ಬಗ್ಗೆ ಈ ರೀತಿಯಾಗಿ ಬರೆಯಲಾಗಿದೆ. ಗೀಲಾನ್ ಎಂಬ ಗ್ರಾಮದಲ್ಲಿ ಆರಂಭಿಕ ಶಿಕ್ಷಣ ಪಡೆದ ನಂತರ ತನ್ನ ತಾಯಿಯೊಂದಿಗೆ, "ಅಮ್ಮಾ! ನಾನು ಇನ್ನೂ ಓದಲು ಬಯಸುತ್ತೇನೆ" ಎಂದು ಹೇಳಿದರು. ಅವರ ತಾಯಿಯೂ ಬಹಳ ಸುಶೀಲ ಮಹಿಳೆಯಾಗಿದ್ದರು. ಅವರೂ ಮಗನ ಈ ಅಭಿರುಚಿಯನ್ನು ಕಂಡು ಬಹಳ ಸಂತುಷ್ಟಗೊಂಡರು.

ಹೆಚ್ಚಿನ ವಿದ್ಯಾಭ್ಯಾಸಕ್ಕಾಗಿ ನಿನಗೆ ಬಗ್ದಾದ್‌ಗೆ ಹೋಗಬೇಕಾಗಿದೆ ಎಂದರು. ಅಬ್ದುಲ್ ಕಾದಿರ್‌ರವರು ಬಗ್ದಾದಿಗೆ ಹೋಗಲು ಸಿದ್ಧರಾದರು. ತಾಯಿಯೂ ಬಹಳ ಸಂತೋಷದಿಂದ ಅನುಮತಿ ನೀಡಿದರು. ಹೋಗುವಾಗ 40 ಚಿನ್ನದ ನಾಣ್ಯಗಳನ್ನು ನೀಡುತ್ತ ಹೇಳಿದರು "ಪ್ರೀತಿಯ ಮಗನೇ! ನಾನು ನಿನ್ನನ್ನು ಅಲ್ಲಾಹನಿಗಾಗಿ ಬಿಟ್ಟುಕೊಡುತ್ತಿದ್ದೇನೆ. ಮತ್ತೆ ನಿನ್ನನ್ನು ನಾನು ಕಾಣದೆ ಇರಬಹುದು. ನನ್ನ ಮಗನೇ!

ನಾನು ನಿನಗೆ ಯಾವಾಗಲೂ ಸತ್ಯವನ್ನೇ ನುಡಿಯುವ ಉಪದೇಶ ಮಾಡುತ್ತೇ
ಎಂತಹ ಕಷ್ಟ ಬಂದರೂ ನೀನು ಸತ್ಯ ಹೇಳುವುದನ್ನು ಬಿಡಬಾರದು." ಅಬ್ದು
ಕಾದಿರ್‌ರವರು ತನ್ನ ತಾಯಿಗೆ ವಾಗ್ದಾನ ಮಾಡಿ, ಒಂದು ಯಾತ್ರಿಕರ ತಂಡ
ಜೊತೆಗೆ ಬಗ್ದಾದ್‌ಗೆ ಪ್ರಯಾಣ ಬೆಳೆಸಿದರು. ತೆರಳುವ ಸಮಯದಲ್ಲಿ ಆ 4
ನಾಣ್ಯಗಳನ್ನು ಅವರ ತಾಯಿ, ಅವು ಎಲ್ಲಿಯೂ ಬೀಳಬಾರದು ಎಂದು ಅವ
ಅಂಗಿಯಲ್ಲಿ ಹೊಲಿದಿದ್ದರು.

ಇನ್ನು ಕೇಳಿ! ಯಾತ್ರಿಕರ ದಂಡು ಮುಂದೆ ಸಾಗಿತು. ಒಂದು ಕಾಡಿನಿಂ
ಹಾದು ಹೋಗುವಾಗ ಆಕಸ್ಮಿಕವಾಗಿ ದರೋಡೆಕೋರರು ಆಕ್ರಮಣ ಮಾಡಿದರ
ಯಾತ್ರಿಕರ ಸಾಮಾನುಗಳನ್ನು ಲೂಟಿ ಮಾಡಲು ಆರಂಭಿಸಿದರು. ಒಬ್ಬ ದರೋಡೆಕೋ
ಶೇಖ್ ಅಬ್ದುಲ್ ಕಾದಿರ್‌ರಲ್ಲಿ ಕೇಳಿದನು, "ನಿನ್ನ ಹತ್ತಿರ ಏನಾದರೂ ಇದೆಯೇ?
ಅವರು, "ಹೌದು! ನನ್ನ ಹತ್ತಿರ 40 ಚಿನ್ನದ ನಾಣ್ಯಗಳಿವೆ" ಎಂದು ಉತ್ತರಿಸಿದರ
ಇದನ್ನು ಕೇಳಿದ ದರೋಡೆಕೋರ, ಹುಡುಗ ಅವನೊಂದಿಗೆ ಚೇಷ್ಟೆ ಮಾಡುತ್ತಿದ್ದಾನೆಂದ
ಭಾವಿಸಿದನು. ಆತ ನಿರ್ಗಮಿಸಿದನು. ಮತ್ತೊಬ್ಬ ದರೋಡೆಕೋರ ಬಂದನ
ಆತನೂ, "ನಿನ್ನ ಹತ್ತಿರ ಏನಾದರೂ ಇದೆಯೇ?" ಎಂದು ಕೇಳಿದನು. ಅವ
ಅದೇ ಉತ್ತರ ನೀಡಿದರು, "ಹೌದು! ನನ್ನ ಹತ್ತಿರ 40 ನಾಣ್ಯಗಳಿವೆ." ಆ
ದರೋಡೆಕೋರನೂ ಹುಡುಗ ಚೇಷ್ಟೆ ಮಾಡುತ್ತಿದ್ದಾನೆಂದು ಭಾವಿಸಿದರು. ಹೀಗೆಯೆ
ಬಹಳಷ್ಟು ದರೋಡೆಕೋರರು ಹುಡುಗ ಚೇಷ್ಟೆ ಮಾಡುತ್ತಿದ್ದಾನೆಂದು ಬಗೆದರ
ಹೀಗೆಯೇ ಬಹಳಷ್ಟು ದರೋಡೆಕೋರರು ಮಾತಾಡಿದರು. ಈ ಮಾತು ದರೋಡೆಕೋರ
ಸರದಾರನ ಕಿವಿಗೂ ಹೋಯಿತು. ಆತ ಆ ಹುಡುಗನನ್ನು ತನ್ನ ಮುಂ
ಹಾಜರುಪಡಿಸಲು ಆಜ್ಞಾಪಿಸಿದ.

ದರೋಡೆಕೋರರು ಇವರನ್ನು ಸರದಾರನ ಬಳಿಗೆ ಕೊಂಡು ಹೋದರ
ಸರದಾರ ಕೇಳಿದನು, "ನಿನ್ನಲ್ಲಿ ಏನಾದರೂ ಇದೆಯೇ?" ಅವರು, "ಹೌದು! ನನ
ಹತ್ತಿರ 40 ಚಿನ್ನದ ನಾಣ್ಯಗಳಿವೆ" ಎಂದು ಉತ್ತರಿಸಿದರು. ಸರದಾರ ಮ
ಕೇಳಿದನು, "ಎಲ್ಲಿವೆ?" ಅವರು "ಇಲ್ಲಿ ನೋಡಿ, ನನ್ನ ಬಟ್ಟೆಯಲ್ಲಿ ಹೊಲಿಯಲಾಗಿವೆ
ಎಂದು ಹೇಳಿದರು.

ಅವರು ಹೇಳಿದಂತೆ, ದರೋಡೆಕೋರರ ಸರದಾರ ಅವರನ
ನೋಡಿದನು. "ನಾವು ಯಾತ್ರಿಕರನ್ನು ಲೂಟಿ ಮಾಡುತ್ತಿದ್ದೇವೆಂದ
ತಿಳಿದೂ ನೀನು ನಿನ್ನ ಹತ್ತಿರವಿದ್ದದ್ದನ್ನು ನಮಗೇಕೆ ತಿಳಿಸಿದೆ?" ಎಂದು ಆ
ಕೇಳಿದಾಗ ಉತ್ತರವಾಗಿ, "ನನ್ನ ತಾಯಿ, ನನಗೆ ಸತ್ಯವನ್ನೇ ಹೇಳುವಂತೆ ವಾಗ್ದಾ

ಗೆದುಕೊಂಡಿದ್ದಳು, ಹಾಗಿರುವಾಗ ನಾನು ಸುಳ್ಳು ಹೇಗೆ ಹೇಳಲಿ?" ಎಂದು
ವರು ಹೇಳಿದರು.

ಒಬ್ಬ ಮುಗ್ಧ ಬಾಲಕನ ಈ ಉತ್ತರ, ದರೋಡೆಕೋರರ ಸರದಾರನ ಮೇಲೆ
ಹಳ ಗಾಢ ಪ್ರಭಾವ ಬೀರಿತು. ನೋಡುತ್ತಿದ್ದಂತೆಯೇ ಆತ ಅಳ ತೊಡಗಿದ,
ತ್ತೆ ಹೇಳತೊಡಗಿದ, "ತನ್ನಲ್ಲಿರುವ ಸಂಪತ್ತು ದರೋಡೆಯಾದರೂ ಚಿಂತೆ
ಮಾಡದೆ, ತನ್ನ ತಾಯಿಗೆ ಕೊಟ್ಟ ವಚನದ ಚಿಂತೆ ಒಬ್ಬ ಬಾಲಕನಿಗೆ ಎಷ್ಟೊಂದಿದೆ!
ದರೆ ನಾನಾದರೋ ಅಲ್ಲಾಹನಿಗೆ ವಚನ ಕೊಟ್ಟಿದ್ದೆ, ದೇವನೇ! ನೀನೇ ನನ್ನ ಪ್ರಭು,
ರಿಪಾಲಕ, ನಾನು ನಿನ್ನ ಆದೇಶಗಳ ಮೇಲೆ ನಡೆಯುತ್ತೇನೆ. ಆದರೆ ವರ್ಷಗಳು
ತಿಸಿದವು. ನಾನು ಆ ವಾಗ್ದಾನವನ್ನು ಮರೆತು ಬಿಟ್ಟಿದ್ದೇನೆ. ಮತ್ತು ನನ್ನ
ರಿಪಾಲಕನಿಗೆ ಅವಿಧೇಯನಾಗಿದ್ದೇನೆ."

ನಂತರ ಸರದಾರನು ಪಶ್ಚಾತ್ತಾಪ(ತೌಬಾ)ಪಟ್ಟನು. ದರೋಡೆಕೋರರಿಗೆ ಯಾತ್ರಿಕರು
ೋಚಿದ ಸಾಮಾನುಗಳನ್ನು ಮರಳಿಸುವಂತೆ ಆದೇಶಿಸಿದನು. ಅವನ ಆದೇಶದಂತೆ
ಲ್ಲ ಸಾಮಾನುಗಳನ್ನೂ ಮರಳಿಸಲಾಯಿತು. ತದನಂತರ ಉಳಿದೆಲ್ಲ ದರೋಡೆಕೋರರೂ
ಶ್ಚಾತ್ತಾಪ ಮಾಡಿದರು.

ಮಕ್ಕಳೇ! ಸರ್ವಸ್ತುತಿಗಳು ಅಲ್ಲಾಹನಿಗೆ ಮೀಸಲು. ಅಬ್ದುಲ್ ಕಾದಿರ್‌ರಿಗೆ
ಂತಹ ಒಳ್ಳೆಯ ಮಾತೆ ಸಿಕ್ಕಿದ್ದು ಅಲ್ಲಾಹನ ಅನುಗ್ರಹವೇ ಆಗಿದೆ. ಅವರ
ಾಯಿಯ ಹಿತನುಡಿಗಳನ್ನು ನೆನಪಿನಲ್ಲಿಟ್ಟು, ಅದರಂತೆ ನಡೆದಿರುವುದೂ ಸಹ
ಲ್ಲಾಹನ ಕೃಪೆಯಾಗಿತ್ತು. ಅಲ್ಲಾಹನು ನಮ್ಮೆಲ್ಲರಿಗೂ ಸದಾಚಾರಿಗಳಾಗಿ ನಡೆಯುವ
ಕ್ತಿ ನೀಡಲಿ.

# ಅಲ್ಲಾಮಾ ಇಬ್ನು ತೀಮಿಯಾ(ರ)ರ ಬಾ

ಒಂದು ಸಲ ಹಲಬ್‌ನ ಒಬ್ಬ ವಿದ್ವಾಂಸರು ಡಮಾಸ್ಕಸ್‌ಗೆ ಬಂದರು. ಇಲ್ಲೊ ಅಹ್ಮದ್ ಬಿನ್ ತೀಮಿಯ್ಯಾ ಎಂಬ ಹೆಸರಿನ ಬಾಲಕನಿದ್ದಾನೆ. ಅವನು ಆ ಪಾಠವನ್ನು ಅತೀ ಶೀಘ್ರವಾಗಿ ಕಂಠಪಾಠ ಮಾಡಿಕೊಳ್ಳುತ್ತಾನೆಂದು ಕೇಳಿದ್ದೇ ಎಂದು ಅವರು ಹೇಳಿದರು. ಆತನನ್ನು ಭೇಟಿಯಾಗಿ, ಅವನನ್ನು ಪರೀಕ್ಷಿಸಬೇಕೆಂ ಅವರು ಬಯಸಿದರು. ಇಬ್ನು ತೀಮಿಯ್ಯಾ ಪಾಠ ಕಲಿಯಲು ಹೋಗು ದಾರಿಯಲ್ಲಿರುವ ಒಬ್ಬ ದರ್ಜಿಯ ಅಂಗಡಿಯಲ್ಲಿ ಅವರು ಕಾಯುತ್ತಾ ಕುಳಿತುಕೊಂಡ "ಆ ಬಾಲಕ ಬರುತ್ತಿರಬಹುದು. ಅವನ ಶಾಲೆಯ ದಾರಿ ಇದೇ ಆಗಿದೆ, ಬ ಕುಳಿತು ಕೊಳ್ಳಿ" ಎಂದು ಆ ದರ್ಜಿ ಅವರಿಗೆ ಹೇಳಿದನು. ಸ್ವಲ್ಪ ಹೊತ್ತಿನ ನಂತ ಕೆಲವು ಮಕ್ಕಳು ಆ ಮಾರ್ಗದ ಮೂಲಕ ಹಾದು ಹೋದರು. ದರ್ಜಿ ಹೇಳಿದನ "ಅಲ್ಲಿ ನೋಡಿ! ಯಾವ ಹುಡುಗನ ಕೈಯಲ್ಲಿ ದೊಡ್ಡದೊಂದು ಸ್ಲೇಟು ಇದೆಯೆ ಆತನೇ ಇಬ್ನು ತೀಮಿಯ್ಯಾ."

ಆ ವಿದ್ವಾಂಸರು ಆ ಬಾಲಕನನ್ನು ಕರೆದರು. ಆತ ಬಂದ ನಂತರ ಆತನಲ್ಲಿ ಸ್ಲೇಟನ್ನು ತೆಗೆದುಕೊಂಡು ಹೇಳಿದರು, "ಈ ಸ್ಲೇಟಿನ ಮೇಲೆ ಬರೆದಿರುವುದನ್ನ ಅಳಿಸಿ ಹಾಕು." ಅಳಿಸಿದ ನಂತರ ಅವರು ಅದರ ಮೇಲೆ ಹನ್ನೊಂದು ಅಥ ಹದಿಮೂರು ಹದೀಸ್‌ಗಳನ್ನು ಬರೆಯಿಸಿದರು ಮತ್ತು ಓದಲು ಹೇಳಿದರು. ಬಾ ಒಂದು ಸಲ ಗಮನಕೊಟ್ಟು ಓದಿದ. ವಿದ್ವಾಂಸರು ಸ್ಲೇಟನ್ನು ಎತ್ತಿಕೊಂಡರು ಮ ಆ ಎಲ್ಲ ಹದೀಸ್‌ಗಳನ್ನು ಆವರ್ತಿಸಲು ಹೇಳಿದರು. ಬಾಲಕ ಆ ಎ ಹದೀಸ್‌ಗಳನ್ನು ಪುನರುಚ್ಚರಿಸಿದ. ವಿದ್ವಾಂಸರು ಹೇಳಿದರು, "ಸರಿ! ಇವೆಲ್ಲವ ಅಳಿಸಿ ಹಾಕು." ಬಳಿಕ ಅವುಗಳ ಪರಂಪರೆ ಮತ್ತು ಉಲ್ಲೇಖಗಳನ್ನು ಬರೆಯಿ ಓದಲು ಹೇಳಿದರು. ಬಾಲಕ ಬಹಳ ಗಮನಕೊಟ್ಟು ನೋಡಿದ ಮತ್ತು ಪುನರುಚ್ಚರಿಸಿ ಇದನ್ನೆಲ್ಲ ನೋಡಿದ ಆ ವಿದ್ವಾಂಸರು, "ಒಂದು ವೇಳೆ ಈ ಬಾಲಕ ಜೀವಂತನಾ ಉಳಿದರೆ ಮಹಾ ಮೇಧಾವಿಯಾಗಬಹುದು. ಏಕೆಂದರೆ ಇಂತಹ ಇನ್ನೊಂ

ುದಾಹರಣೆ ಸಿಗುವುದು ಕಷ್ಟ" ಎಂದು ನುಡಿದರು.

ಇಬ್ನು ತೀಮಿಯ್ಯಾರವರು ದೊಡ್ಡವರಾಗಿ ತನ್ನ ಕಾಲದ ಒಬ್ಬ ಮಹಾ ದ್ವಾಂಸರಾದರು. ಅವರು ತನ್ನ ಜ್ಞಾನದಿಂದ ಜಗತ್ತಿನ ಕೆಡುಕುಗಳನ್ನು ನಿವಾರಿಸಿದರು. ಸ್ಲಾಮಿನ ಶತ್ರುಗಳ ಜೊತೆ ಹೋರಾಡಿದರು. ಇಬ್ನು ತೀಮಿಯ್ಯಾರವರು ಅಲ್ಲಾಹನನ್ನು ೂರತುಪಡಿಸಿ ಇನ್ನಾರಿಗೂ ಅಂಜುತ್ತಿರಲಿಲ್ಲ. ಅವರು ಬರೆದ ಗ್ರಂಥಗಳನ್ನು ಂದೂ ಸಹ ದೊಡ್ಡ ದೊಡ್ಡ ವಿದ್ವಾಂಸರು ಅಭ್ಯಸಿಸುತ್ತಾರೆ ಮತ್ತು ಅದರ ಯೋಜನ ಪಡೆಯುತ್ತಾರೆ.

# ಅಲ್ಲಾಮಾ ಇಬ್ನು ಜೂಝಿಯವರ(ರ) ಬಾ

ವಿದ್ವಾಂಸರಾದ ಇಬ್ನು ಜೂಝೀಯವರು ಹಿ.ಶ. 508ರಲ್ಲಿ ಜನಿಸಿದ
ಅವರ ತಂದೆ ತಾಯಿಗಳು ಬಗ್ದಾದ್‌ನ ನಿವಾಸಿಗಳಾಗಿದ್ದರು. ಆ ಕಾಲದಲ್ಲಿ ಬಗ್ದಾ
ನಗರದಲ್ಲಿ ದೊಡ್ಡ ವಿದ್ವಾಂಸರುಗಳು ಇದ್ದರು. ಅವರ ತಾಯಿ, ಅವರನ್ನು ಆ ಕಾ
ಒಬ್ಬ ದೊಡ್ಡ ವಿದ್ವಾಂಸರಾದ ಇಬ್ನು ನಾಸಿರ್‌ರ ಪಾಠಶಾಲೆಯಲ್ಲಿ ಸೇರಿಸಿದ
ತಮ್ಮ ವಿದ್ಯಾರ್ಥಿ ಜೀವನದ ಬಗ್ಗೆ ಸ್ವಯಂ ಇಬ್ನು ಜೂಝೀಯವರೇ ವಿವರಿಸು
ತಮ್ಮ ಮಗನಿಗೆ ಈ ರೀತಿಯಾಗಿ ಹೇಳಿದರು,

"ನಾನು ನನ್ನ ಆರನೆಯ ವಯಸ್ಸಿನಲ್ಲಿ ಓದಲು ಪಾಠಶಾಲೆಗೆ ಹೋದ
ನನಗೆ ಇನ್ನೂ ಚೆನ್ನಾಗಿ ನೆನಪಿದೆ. ನಾನು ದಾರಿ ಮಧ್ಯದಲ್ಲಿ ಮಕ್ಕಳ ಜೊತೆಗು
ಆಟವಾಡಿದ್ದೇನೆಯೇ ಅಥವಾ ನಕ್ಕುನಲಿದಿದ್ದೇನೆಯೇ ಎಂಬುದು ನನಗೆ ನೆನಪಿ
ಏಳನೆಯ ವಯಸ್ಸಿನಲ್ಲಿ ಜಾಮಿಯಾ ಮಸೀದಿಯ ಮುಂದಿನ ಮೈದಾ
ಹೋಗುತ್ತಿದ್ದೆ. ಅಲ್ಲಿ ದೊಡ್ಡ ದೊಡ್ಡ ವಿದ್ವಾಂಸರಿಂದ ಹದೀಸ್ ಪಾಠಗಳ
ಆಲಿಸುತ್ತಿದ್ದೆ. ಅವರು ಹೇಳುತ್ತಿದ್ದುದೆಲ್ಲ ನನಗೆ ಕಂಠಪಾಠವಾಗಿ ಬಿಡುತ್ತಿತ್ತು. ಮ
ಬಂದು ಅದನ್ನೆಲ್ಲ ಬರೆದಿಡುತ್ತಿದ್ದೆ. ನನ್ನ ಸಮವಯಸ್ಸಿನ ಹುಡುಗರೆಲ್ಲರೂ ಟೈಗ್
ನದಿಯ ತೀರದಲ್ಲಿ ಆಡುತ್ತಿದ್ದರು ಅಥವಾ ಯಾರೋ ಜಾದೂಗಾರನ ಆಟವ
ನೋಡಲು ಹೋಗುತ್ತಿದ್ದರು. ಆದರೆ, ನಾನು ಅವರೆಲ್ಲರಿಂದ ದೂರ ಉಳಿ
ಗ್ರಂಥಗಳ ಅಭ್ಯಾಸದಲ್ಲಿ ತಲ್ಲೀನನಾಗುತ್ತಿದ್ದೆ.

ನಾನು ನನ್ನ ಗುರುಗಳ ಹಾಗೂ ವಿದ್ವಾಂಸರ ಬಳಿಗೆ ಹೋಗಲು ತರಾತ
ಮಾಡುತ್ತಿದ್ದೆ. ಒಮ್ಮೊಮ್ಮೆ ತಡವಾದರೆ, ವೇಗವಾಗಿ ಓಡುತ್ತಾ ಹೋಗುತ್ತಿ
ಅದರಿಂದ ನನಗೆ ಶ್ವಾಸೋಚ್ಛ್ವಾಸದಲ್ಲಿ ತೊಂದರೆ ಆಗುತ್ತಿತ್ತು. ನನ್ನ ಹಗಲುರ
ಗಳೆಲ್ಲವೂ ಕಲಿಯುವುದರಲ್ಲೇ ಕಳೆಯುತ್ತಿತ್ತು. ನನ್ನ ಊಟದ ಯಾವುದೇ ಸರಿಯ
ವ್ಯವಸ್ಥೆ ಇರಲಿಲ್ಲ. ಸಿಕ್ಕಿದಲ್ಲಿ, ಅಲ್ಲಾಹನನ್ನು ಸ್ತುತಿಸಿ ತಿನ್ನುತ್ತಿದ್ದೆ. ಅಲ್ಲಾ

ಅನುಗ್ರಹದಿಂದ ನಾನು ಹೊಟ್ಟೆಗಾಗಿ ಯಾರಲ್ಲಿಯೂ ಕೈ ಚಾಚಿಲ್ಲ. ಈ ಬಗ್ಗೆ ನನ್ನ ಮೇಲೆ ಅಲ್ಲಾಹನ ಹೊರತು ಮತ್ಯಾರದೇ ಉಪಕಾರವಿಲ್ಲ.

ಇಬ್ನು ಜೂಝೀಯವರಿಗೆ ಬಾಲ್ಯದಿಂದಲೇ ಜ್ಞಾನಾರ್ಜನೆಯ ಆಸಕ್ತಿ ಇತ್ತು. ಅವರು ಅದಕ್ಕಾಗಿ ಬಹಳ ಕಷ್ಟಪಟ್ಟರು. ಈ ಆಸಕ್ತಿ ಮತ್ತು ಕಠಿಣ ಶ್ರಮದ ಪ್ರತಿಫಲವಾಗಿ ಅಲ್ಲಾಹನು ಅವರಿಗೆ ಎದುರಾದ ಎಲ್ಲ ಕಷ್ಟ ಕಾರ್ಪಣ್ಯಗಳನ್ನು ದೂರೀಕರಿಸಿದನು. ಇಪ್ಪತ್ತು ಸಾವಿರ ಗ್ರಂಥಗಳನ್ನು ಅಭ್ಯಾಸ ಮಾಡಿದ್ದೇನೆಂದು ಸ್ವತಃ ಅವರೇ ಹೇಳುತ್ತಿದ್ದರು. ಗ್ರಂಥಗಳಿಂದ ಎಂದೂ ನನಗೆ ಜಿಗುಪ್ಸೆ ಬಂದಿಲ್ಲ. ಹೊಸ ಗ್ರಂಥ ಸಿಕ್ಕಿದಾಗ ನಿಧಿ ಸಿಕ್ಕಿದಷ್ಟು ಸಂತೋಷವಾಗುತ್ತಿತ್ತು ಎಂದವರು ಹೇಳುತ್ತಿದ್ದರು.

ಹೀಗೆ ಇಬ್ನು ಜೂಝೀ ಇಸ್ಲಾಮಿನ ಒಬ್ಬ ಮಹಾ ವಿದ್ವಾಂಸರಾದರು. ಅವರಿಂದಾಗಿ ಅಂದು ಸಾವಿರಾರು ಜನರು ಸತ್ಯ ಧರ್ಮವನ್ನು ಸ್ವೀಕರಿಸಿದರು. ಲಕ್ಷಾಂತರ ಜನರು ಅವರ ಉಪದೇಶವನ್ನು ಕೇಳಿ ಕೆಟ್ಟ ಕೆಲಸದಿಂದ ಪಶ್ಚಾತ್ತಾಪ ಪಟ್ಟು ದೂರ ಉಳಿದರು. ಅಲ್ಲಾಹನು ನಮಗೂ ಅವರಂತೆ ಕೆಲಸ ಮಾಡುವ ಪ್ರೇರಣೆ ಶಕ್ತಿ ನೀಡಲಿ. ಆಮೀನ್.

# ಸಯ್ಯದ್ ಅಹ್ಮದ್ ಶಹೀದ್(ರ)ರ ಬಾಲ್ಯ

ಸುಮಾರು ನೂರ ಐವತ್ತು ವರ್ಷಗಳ ಹಿಂದಿನ ಮಾತು. ನಮ್ಮ ದೇಶದ ಅಲ್ಲಾಹನ ಪ್ರೀತಿಗೆ ಪಾತ್ರರಾದ ಒಬ್ಬ ಮಹಾನ್ ವ್ಯಕ್ತಿ ಗತಿಸಿ ಹೋಗಿದ್ದಾರೆ. ಅವರ ಹೆಸರು 'ಸಯ್ಯದ್ ಅಹ್ಮದ್'. ಸಯ್ಯದ್ ಸಾಹೇಬರು ಲಖ್ನೋದ ಸಮೀಪದ ರಾಯ್‌ಬರೇಲಿ ಎಂಬ ಹಳ್ಳಿಯಲ್ಲಿ ಜನಿಸಿದರು. ಸಯ್ಯದ್ ಸಾಹೇಬರಿಗೆ, ಧರ್ಮ ಪ್ರಚಾರ ಹಾಗೂ ಅಲ್ಲಾಹನ ಸಂದೇಶವನ್ನು ಅಲ್ಲಾಹನ ದಾಸರಿಗೆ ತಲಪಿಸುವ ಆಸ ಸದಾ ಇರುತ್ತಿತ್ತು. 'ಇಸ್ಲಾಮ್', ಜಗತ್ತಿನಲ್ಲಿ ಗುಲಾಮನಾಗಿರಲು ಬಂದಿಲ್ಲ'ವೆಂದ ಅವರು ಹೇಳುತ್ತಿದ್ದರು. ಎಲ್ಲಿಯ ವರೆಗೆ ಯಾವುದೇ ದೇಶದ ಆಡಳಿತ ಅಲ್ಲಾಹ ನಂಬಿಗಸ್ಥ ಜನರ ಕೈಯಲ್ಲಿರುವುದಿಲ್ಲವೋ ಅಲ್ಲಿಯ ವರೆಗೆ ಜನರಿಗೆ ಶಾಂತಿ ಸುವ್ಯವಸ್ಥೆ ದೊರಕುವುದಿಲ್ಲವೆಂದು ಅವರು ಹೇಳುತ್ತಿದ್ದರು. ಈ ಕಾರಣದಿಂದಲೆ ಅವರು ಬ್ರಿಟಿಷ್ ಆಡಳಿತಕ್ಕೆ ವಿರೋಧ ವ್ಯಕ್ತ ಪಡಿಸಿದ್ದರು. ಅಲ್ಲಾಹನ ಮಾರ್ಗದ ಜಿಹಾದ್ ಮಾಡುವ ಅತೀವ ಅಭಿರುಚಿ ಸಯ್ಯದ್ ಅಹ್ಮದ್‌ರಲ್ಲಿ ತುಂ ತುಳುಕುತ್ತಿತ್ತು. ಅದೇ ಹಾದಿಯಲ್ಲಿ ಅವರು ಹುತಾತ್ಮರಾದರು. ಅವರ ಬಾಲ್ಯ ಘಟನೆಗಳು ಅತ್ಯಂತ ಸ್ವಾರಸ್ಯಕರ ಹಾಗೂ ಭಕ್ತಿ ವರ್ಧಕವಾಗಿವೆ. ಕೆಲವೊಂದ ಘಟನೆಗಳನ್ನು ನಾವು ಇಲ್ಲಿ ಕೊಡುತ್ತಿದ್ದೇವೆ.

ಸಯ್ಯದ್ ಅಹ್ಮದ್‌ರಿಗೆ ಬಾಲ್ಯದಲ್ಲಿ ಆಟವಾಡುವುದರಲ್ಲಿ ಬಹಳ ಆಸಕ್ತಿಯಿತ್ತು ಆದರೆ ಅವರು ಕೆಟ್ಟ ಆಟಗಳನ್ನು ಆಡುತ್ತಿರಲಿಲ್ಲ. ದೇಹಕ್ಕೆ ಶಕ್ತಿ ನೀಡುವ ಮತ ವ್ಯಕ್ತಿಯನ್ನು ನಿರ್ಭಯ ಹಾಗೂ ಶೂರರನ್ನಾಗಿ ಮಾಡುವ ಆಟಗಳನ್ನು ಆಡುತ್ತಿದ್ದರು ಕಬಡ್ಡಿಯನ್ನು ಅವರು ಬಹಳ ಆಸಕ್ತಿಯಿಂದ ಆಡುತ್ತಿದ್ದರು. ಅವರು ತಮ್ಮ ಸಂಗಾ ಗಳ ಎರಡು ಗುಂಪುಗಳನ್ನು ಮಾಡಿ, ಒಂದಕ್ಕೆ ಇನ್ನೊಂದರ ಮೇಲೆ ಆಕ್ರಮ ಮಾಡಲು ಆದೇಶಿಸುತ್ತಿದ್ದರು. ಇದರಲ್ಲಿ ಅವರೂ ಬಹಳ ಆಸಕ್ತಿಯಿಂದ ಭಾಗವಹಿ ಸುತ್ತಿದ್ದರು. ಕೆಲವೊಮ್ಮೆ ಅವರು 'ಇಸ್ಲಾಮಿ ಸೈನ್ಯ'ವನ್ನು ರಚಿಸುತ್ತಿದ್ದರು ಮತ ಘೋಷಣೆಗಳನ್ನು ಕೂಗುತ್ತಾ ಇನ್ನೊಂದು ಗುಂಪಿನ ಮೇಲೆ ಮುಗಿ ಬೀಳುತ್ತಿದ್ದರು

ಸಯ್ಯದ್ ಸಾಹೇಬರು ವ್ಯಾಯಾಮದಲ್ಲಿ ಬಹಳ ಆಸಕ್ತಿ ಹೊಂದಿದ್ದರು. ವರು ದಿನನಿತ್ಯ ಸೂರ್ಯೋದಯದ ನಂತರ ಒಂದು ತಾಸು ವ್ಯಾಯಾಮ ಾಡುತ್ತಿದ್ದರು. ಕುಸ್ತಿ ಆಡುತ್ತಿದ್ದರು. ಐನೂರು ದಂಡ ಹೊಡೆಯುತ್ತಿದ್ದರು. ಅವರಲ್ಲಿ ಪ್ಪತ್ತು ಮೂವತ್ತು ಮಣಭಾರದ ಗದೆಗಳು ಇದ್ದವು. ಅವರು ತಾಸುಗಟ್ಟಲೆ ವುಗಳನ್ನು ತಿರುಗಿಸುತ್ತಿದ್ದರು. ಅವರಿಗೆ ಈಜುವುದು ಸಹ ಗೊತ್ತಿತ್ತು.

ಒಂದು ಸಲ ಅಲ್ಲಾಹನ ಮಾರ್ಗದಲ್ಲಿ ಜೀವವನ್ನು ಪಣಕ್ಕಿಡುವ ಅವಕಾಶ ಂದೊದಗಿದಾಗ ಅವರು ಖಡ್ಗವನ್ನು ತೆಗೆದುಕೊಳ್ಳಲು ಮನೆಗೆ ಧಾವಿಸಿದರು. ನುಮತಿ ಕೇಳಲು ತಾಯಿಯ ಬಳಿ ಹೋದರು. ಆಗ ಅವರ ತಾಯಿಯು ಮಾಝ್ ಮಾಡುತ್ತಿದ್ದರು. ಅಷ್ಟರಲ್ಲಿಯೇ ಸಯ್ಯದ್ ಸಾಹೇಬರಿಗೆ ಹಾಲುಣಿಸಿದ ರ್ಣಳು ಅಲ್ಲಿಗೆ ಬಂದಳು. ಆಕೆ ಅವರನ್ನು ತಡೆದು, "ನಿನಗೇಕೆ ಚಿಂತೆ ಮಗಾ? ಯಾಕೆ ನೀನು ನಿನ್ನ ಜೀವವನ್ನು ಅಪಾಯಕ್ಕೆ ಒಡ್ಡುತ್ತಿರುವಿ?" ಎಂದು ಕೇಳಿದಳು.

ಸಯ್ಯದ್ ಸಾಹೇಬರ ತಾಯಿಯು ನಮಾಝ್ ಮುಗಿದ ನಂತರ ಎಲ್ಲ ವರಗಳನ್ನು ಕೇಳಿದಳು. ನೀತಿವಂತಳಾದ ಆಕೆ ಎಲ್ಲವನ್ನೂ ಕೇಳಿದ ನಂತರ ೀಳಿದಳು, "ಅಕ್ಕಾ! ಅಹ್ಮದ್‌ನ ಬಗ್ಗೆ ನಿನಗೆ ಅಪಾರ ವಾತ್ಸಲ್ಯವಿದೆ. ಆದರೆ, ನೀನು ನ್ನ ಸಮಾನವಾಗಲಾರೆ. ಅಹ್ಮದ್‌ನ ಮೇಲೆ ನಿನಗಿಂತ ನನ್ನ ಹಕ್ಕು ಹೆಚ್ಚಿದೆ. ನೀನೇ ಲೋಚಿಸಿ ನೋಡು, ಇದು ತಡೆಯುವ ಸಮಯವಲ್ಲ. ಅವನನ್ನು ಹೋಗಲಿಕ್ಕೆ ಡು."

ಅನಂತರ ತನ್ನ ಮಗನನ್ನು ನೋಡಿ ಹೇಳಿದಳು, "ಮಗನೇ! ಬೇಗ ಹೋಗು, ದರೆ ನೋಡು, ಹೋರಾಟದಲ್ಲಿ ಬೆನ್ನು ತೋರಿಸಬಾರದು, ಅನ್ಯಥಾ ಜೀವವಿರುವ ರೆಗೂ ನಿನ್ನ ಮುಖವನ್ನು ನೋಡಲಾರೆ."

ಸಯ್ಯದ್ ಸಾಹೇಬರು ಕದನಕ್ಕೆ ಹೋದರು. ಆದರೆ ಕೆಲವು ಬುದ್ಧಿವಂತ ನರು ಮಧ್ಯಸ್ತಿಕೆ ವಹಿಸಿ ಜಗಳಾಡುವವರ ಮಧ್ಯೆ ಒಪ್ಪಂದ ಮಾಡಿಸಿದರು. ಯ್ಯದ್ ಸಾಹೇಬರಿಗೆ ಅಲ್ಲಾಹನ ಕಡೆಯಿಂದ ಸಾಕಷ್ಟು ಶಕ್ತಿಬಲ ಸಿಕ್ಕಿತ್ತು. ಅವರ ದಯದಲ್ಲಿ ಭಯ ಎನ್ನುವುದೇ ಇರಲಿಲ್ಲ. ಅಲ್ಲದೆ ಒಳಿತಿನ ಕಾರ್ಯಗಳನ್ನು ಾಡಲು ಯಾವಾಗಲೂ ಪ್ರೇರೇಪಿಸುವ ಒಳ್ಳೆಯ ನೀತಿವಂತ ತಾಯಿಯೇ ಅವರಿಗೆ ೂರಕಿದ್ದರು. ಅಲ್ಲಾಹನ ಕರುಣೆ ಸಯ್ಯದ್ ಸಾಹೇಬರ ಹಾಗೂ ಅವರ ಯಿಯವರ ಮೇಲೆ ಸದಾ ವರ್ಷಿಸುತ್ತಿರಲಿ.

# ಸಯ್ಯದ್ ಮೌದೂದಿಯವರ(ರ) ಬಾಲ್ಯ

ಸಯ್ಯದ್ ಮೌದೂದಿಯವರ ಪೂರ್ಣ ಹೆಸರು 'ಸಯ್ಯದ್ ಅಬುಲ್ ಆಲಾ ಎಂದಾಗಿದೆ. ಆದರೆ ಅವರು 'ಅಲ್ಲಾಮಾ ಮೌದೂದಿ' ಎಂಬ ಹೆಸರಿನಿಂದ ಜಗತ್ತಿನಾದ್ಯಂತ ಪ್ರಸಿದ್ಧರಾಗಿದ್ದಾರೆ. ಮೌದೂದಿ ಸಾಹೇಬರು ಈ ಕಾಲದ ಒಬ್ಬ ಮಹಾನ್ ಇಸ್ಲಾಮೀ ವಿದ್ವಾಂಸರಾಗಿದ್ದರು. ಕೇವಲ ವಿದ್ವಾಂಸರಷ್ಟೇ ಅಲ್ಲ. ತನ್ನಲ್ಲಿರುವ ಜ್ಞಾನವನ್ನು ಅವರು ಬಹಳ ಸುಂದರವಾಗಿ ಮತ್ತು ಮಾರ್ಮಿಕವಾಗಿ ಬೇರೊಬ್ಬರ ಮುಂದೆ ಪ್ರಸ್ತುತ ಪಡಿಸುತ್ತಿದ್ದರು. ಅವರು ಬರೆದ ಲೇಖನಗಳನ್ನು ವಿಚಾರಶೀಲರು ಓದಿದರೆ, ಅವುಗಳಿಂದ ಪ್ರಭಾವಿತರಾಗದೆ ಇರುವುದಿಲ್ಲ. ಮೌದೂದಿ ಸಾಹೇಬರು ಉತ್ತಮ ಪುಸ್ತಕಗಳನ್ನು ರಚಿಸಿದ್ದಾರೆ. ಈ ಪುಸ್ತಕಗಳು ವಿಶ್ವದೆಲ್ಲೆಡೆ ಪ್ರಸಿದ್ಧವಾಗಿವೆಯಲ್ಲದ ಬಹಳಷ್ಟು ಭಾಷೆಗಳಿಗೆ ಅವು ಅನುವಾದಿಸಲ್ಪಟ್ಟಿವೆ.

ಸಯ್ಯದ್ ಮೌದೂದಿಯವರು ಹಗಲಿರುಳು ಇಸ್ಲಾಮೀ ಸರಕಾರದ ಸ್ಥಾಪನೆಗಾ ಚಿಂತಾಕ್ರಾಂತರಾಗಿರುತ್ತಿದ್ದರು ಮತ್ತು ಅದಕ್ಕಾಗಿ ತನು, ಮನ, ಧನ ಎಲ್ಲವನ್ನೂ ತ್ಯಾ ಮಾಡಲು ಸಿದ್ಧರಿರುತ್ತಿದ್ದರು. ಅವರು ತಮ್ಮ ಬಾಲ್ಯದ ಘಟನೆಗಳನ್ನು ಸ್ವತಃ ಬರೆದಿಟ್ಟಿದ್ದಾರೆ. ಅದು ಬಹಳ ಸ್ವಾರಸ್ಯಕರವಾಗಿದೆ. ನಾವು ಮೌದೂದಿ ಸಾಹೇಬರು ಬರೆದ ಲೇಖನದಿಂದ ಅವರ ಬಾಲ್ಯದ ಕೆಲವು ಮುಖ್ಯ ವಿಷಯವನ್ನು ಈ ಕೆಳಗ ಕೊಡುತ್ತಿದ್ದೇವೆ. ಸಯ್ಯದ್ ಸಾಹೇಬರು ಬರೆಯುತ್ತಾರೆ:

ನನಗೆ ನನ್ನ ಕಿರುವಯಸ್ಸಿನ ಮಾತುಗಳು ಇನ್ನೂ ನೆನಪಿವೆ. ತಂದೆಯ ತಂದೆ ಅಜ್ಜ ಹಾಗೂ ತಾಯಿಯ ತಾಯಿಗೆ ಅಜ್ಜಿ ಎಂದು ಹೇಳುತ್ತಾರೆಂಬುದನ್ನು ಮೊದಲ ಬಾರಿ ಕೇಳಿದಾಗ ಆಶ್ಚರ್ಯವಾದದ್ದು ಸಹ ಇಂದಿನ ವರೆಗೆ ನೆನಪಿದೆ! ನನ್ನ ತಂದೆಯವರು ಒಬ್ಬರ ಮಗನಾಗಿದ್ದಾರೆಂದು ನಂಬಲು ನನ್ನ ಮನಸ್ಸು ಸಿದ್ಧವಿರಲಿಲ್ಲ ನನ್ನ ತಂದೆಯವರು ನನ್ನ ಹಾಗೆ ಹುಡುಗನಾಗಿದ್ದರು ಎಂಬ ವಿಚಾರವು ನನಗ ಹೊಳೆಯುತ್ತಿರಲಿಲ್ಲ. ಈ ಹೊಸ ಮಾತನ್ನು ಕೇಳಿ, ನಾನು ಅದರ ಬಗ್ಗೆ ಬಹಳ ದಿನಗಳ ವರೆಗೆ ವಿಚಾರ ಮಾಡತೊಡಗಿದೆ. ಬಹಳಷ್ಟು ವಿಚಾರ ವಿಮರ್ಶೆಯ

ತರ ಈಗ ವಯಸ್ಸಾದವರು ಒಂದು ಕಾಲದಲ್ಲಿ ಮಕ್ಕಳಾಗಿದ್ದರು ಹಾಗೂ ವರಿಗೂ ತಂದೆ ತಾಯಿಗಳಿದ್ದರು ಎಂಬುದನ್ನು ತಿಳಿದುಕೊಂಡೆ.

ನಾನು ಸಣ್ಣವನಾಗಿದ್ದಾಗ 'ಅಪ್ಪ–ಅಮ್ಮ' ಅಂದರೆ ಏನೆಂದು ನನಗೆ ಗೊತ್ತಿರಲಿಲ್ಲ. ವರು ಯಾರು ಮತ್ತು ನಾನು ಅವರ ಬಳಿ ಎಲ್ಲಿಂದ ಬಂದಿದ್ದೇನೆ ಎಂಬುದೂ ಗೆ ಹೊಳೆಯುತ್ತಿರಲಿಲ್ಲ. ಆದರೆ ನನ್ನ ತಂದೆ ಜಗತ್ತಿನಲ್ಲಿಯೇ ಎಲ್ಲರಿಗಿಂತ ಒಳ್ಳೆಯ ಕ್ತಿ ಹಾಗೂ ನನ್ನ ತಾಯಿ ಎಲ್ಲರಿಗಿಂತ ಒಳ್ಳೆಯ ಮಹಿಳೆಯೆಂದು ಮಾತ್ರ ವಶ್ಯಕವಾಗಿ ಅರಿತುಕೊಂಡಿದ್ದೆ.

ನನಗೆ ಅಸೌಖ್ಯವಾದಾಗ ಅಥವಾ ನನಗೆ ಎಲ್ಲಿಯಾದರೂ ಗಾಯವಾದಾಗ ನ್ನ ತಂದೆ ತಾಯಿ ತಳಮಳಗೊಂಡರೆ ನನಗೆ ತಮಾಷೆ ಎನಿಸುತ್ತಿತ್ತು. ಅದಕ್ಕಾಗಿಯೇ ನು ಗೊತ್ತಿದ್ದೂ ಕೆಲವೊಮ್ಮೆ ಅಪಾಯಕ್ಕೆ ಸಿಲುಕಿಕೊಳ್ಳುತ್ತಿದ್ದೆ. ಆ ಸಮಯ ನನ್ನ ದೆ, ತಾಯಿಗೆ ಆಗುವ ತಳಮಳವನ್ನು ನೋಡಿ ನನ್ನ ಬಗ್ಗೆ ಅವರು ಬಹಳ ತೆ ಮಾಡುತ್ತಾರೆಂದು ನನ್ನ ಹೃದಯ ಹೇಳುತ್ತಿತ್ತು. ಇದರಿಂದಲೇ ತಂದೆ, ತಾಯಿ ತ್ತು ಇತರ ಜನರ ಮಧ್ಯೆ ಯಾವ ಅಂತರವಿದೆಯೆಂಬುದನ್ನು ಅರಿತುಕೊಂಡೆ.

ನನ್ನ ದಿವಂಗತ ತಂದೆಯವರು ನನ್ನನ್ನು ಬಹಳ ಒಳ್ಳೆಯ ರೀತಿಯಿಂದ ೀಷಿಸಿದ್ದರು. ಅವರು ದೆಹಲಿಯ ಗೌರವಾನ್ವಿತ ಜನರ ಶುದ್ಧ ಭಾಷೆ ಆಡುತ್ತಿದ್ದರು. ವರು ಆರಂಭದಿಂದಲೇ ನನ್ನ ಭಾಷೆ ಕೆಡಬಾರದೆಂದು ಕಾಳಜಿ ವಹಿಸಿದರು. ವೊಮ್ಮೆ ನನ್ನ ನಾಲಿಗೆಯಿಂದ ತಪ್ಪು ಶಬ್ದ ವ್ಯಕ್ತವಾದರೆ ಅಥವಾ ಅಸಂಬದ್ಧ ತು ಕಲಿತರೆ ಅವರು ನನ್ನನ್ನು ವಿಚಾರಿಸುತ್ತಿದ್ದರು ಮತ್ತು ಸರಿಯಾಗಿ ತಾಡುವುದನ್ನು ಕಲಿಸುತ್ತಿದ್ದರು. ನಂತರ ನನಗೆ ಭಾರತದ ಹಲವಾರು ರಗಳಲ್ಲಿ ಇರುವ ಅವಕಾಶ ಒದಗಿ ಬಂತು. ಬಾಲ್ಯದಲ್ಲಿಯೇ ಯಾವ ಭಾಷೆಯು ತ್ರವಾಗಿತ್ತೋ, ಅದರ ಮೇಲೆ ಬೇರೆ ಯಾವ ಭಾಷೆಯ ಪ್ರಭಾವವೂ ಆಗಲಿಲ್ಲ.

ನನ್ನ ತಂದೆಯವರು ರಾತ್ರಿ ವೇಳೆಯಲ್ಲಿ ನನಗೆ ಪ್ರವಾದಿಗಳ ಇಸ್ಲಾಮೀ ಹಾಸ, ಭಾರತದ ಇತಿಹಾಸದ ಘಟನೆಗಳು ಮತ್ತು ಉಪದೇಶ ಭರಿತ ಕಥೆಗಳನ್ನು ಳುತ್ತಿದ್ದರು. ಇದರ ಪ್ರಯೋಜನಕಾರಿ ಪ್ರಭಾವ ಇಂದೂ ಸಹ ನಾನು ಅನುಭವಿ ತ್ತಿದ್ದೇನೆ.

ನನ್ನ ತಂದೆಯವರು ನನ್ನ ನಡವಳಿಕೆ ಸರಿಯಾಗಿಡಲು ಯಾವಾಗಲೂ ಕಾಳಜಿ ಸುತ್ತಿದ್ದರು. ದುರ್ನಡತೆಯಿಂದ ಕೂಡಿದ ಮಕ್ಕಳ ಜೊತೆಗೆ ಎಂದೂ ನನಗೆ ಲು ಬಿಡುತ್ತಿರಲಿಲ್ಲ. ನಾನು ಏನಾದರೂ ಕೆಟ್ಟ ಚಟ ಕಲಿತರೆ ಬಹಳ ಶ್ರಮಪಟ್ಟು

ಅದನ್ನು ಬಿಡಿಸುತ್ತಿದ್ದರು. ಒಂದು ಸಲ ನಾನು ನಮ್ಮ ಮನೆಯ ಸೇವಕಿಂ
ಮಗುವಿಗೆ ಹೊಡೆದಾಗ ಅವರು ಆ ಮಗುವನ್ನು ಕರೆದು, "ನೀನು ಅವನಿಗೆ ಹೊ
ಎಂದು ಹೇಳಿದರು. ಇದರಿಂದ ನನಗೆ ತಕ್ಕ ಪಾಠ ದೊರಕಿತು. ಅನಂತರ ನಾ
ಯಾವನೇ ದುರ್ಬಲನ ಮೇಲೆ ಕೈ ಎತ್ತಲಿಲ್ಲ. ಅವರು ಅನೇಕ ಸಲ ತಮ್ಮ ಮಿತ್ರ
ಹತ್ತಿರ ನನ್ನನ್ನು ಕರೆದುಕೊಂಡು ಹೋಗುತ್ತಿದ್ದರು. ಅವರ ಮಿತ್ರರೆಲ್ಲರೂ ಸ
ಹಾಗೂ ಸುಶಿಕ್ಷಿತ ಜನರಾಗಿದ್ದರು. ಇಂತಹ ಹಿರಿಯರ ಜೊತೆಗೂಡಿ ಇರುವುದರಿಂ
ನಾನು ಸದ್ಗುಣಗಳನ್ನು ಕಲಿತೆ.

ನನ್ನ ತಂದೆಯವರು ನನ್ನ ಓದು–ಬರಹದ ವ್ಯವಸ್ಥೆಯನ್ನು ಮನೆಯಲ್ಲಿಯೆ
ಮಾಡಿದ್ದರು. ಇದರ ಉದ್ದೇಶ ನಾನು ಕೆಟ್ಟ ಹುಡುಗರ ಸಂಗದಿಂದ ದೂರ ಉಳಿಂ
ಬೇಕು ಹಾಗೂ ನನ್ನ ನಡೆನುಡಿ ಕೆಡಬಾರದು ಎಂದಾಗಿತ್ತು. ಮನೆಯ ಶಿಕ್ಷಣ ನನ
ಬಹಳ ಲಾಭದಾಯಕವಾಗಿ ಪರಿಣಮಿಸಿತು. ಇತರ ವಿದ್ಯಾರ್ಥಿಗಳು 8
ವರ್ಷಗಳಲ್ಲಿ ಪಡೆಯುವಂತಹ ಜ್ಞಾನ ನಾನು ಮನೆಯಲ್ಲಿ 56 ವರ್ಷಗಳಲ್ಲಿ ಪಡೆ
ಹನ್ನೊಂದನೆಯ ವಯಸ್ಸಿನಲ್ಲಿ ನಾನು ಎಂಟನೆಯ ತರಗತಿಗೆ ಕಾಲಿಟ್ಟಾಗ ಅಲ್ಲಿ
ಉಳಿದೆಲ್ಲ ವಿದ್ಯಾರ್ಥಿಗಳಿಗಿಂತ ನಾನು ಸಣ್ಣ ವಯಸ್ಸಿನವನಾಗಿದ್ದರೂ ಒಳ್ಳೆ
ವಿದ್ಯಾರ್ಥಿಯಾಗಿದ್ದೆ.

ಶಾಲೆಗೆ ತಲುಪಿ ನಾನು ಶಾಲೆಯ ಸಭ್ಯ ಹಾಗೂ ಜ್ಞಾನದಲ್ಲಿ ಆಸಕ್ತಿ ಹೊಂದಿ
ಹುಡುಗರ ಜೊತೆ ಗೆಳೆತನ ಬೆಳೆಸಿಕೊಂಡೆ. ನಾನು ನಮ್ಮ ಗುರುಗಳನ್ನು ಬಹ
ಗೌರವಾದರಗಳಿಂದ ಕಾಣುತ್ತಿದ್ದೆ. ನನ್ನ ಗುರುಗಳು ಸಹ ನನ್ನನ್ನು ಬಹಳ ಪ್ರೀತಿ
ತ್ತಿದ್ದರು. ಶಾಲೆಯಲ್ಲಿಯೇ ನನಗೆ ಮೊದಲ ಬಾರಿಗೆ ಲೇಖನಗಳನ್ನು ಬರೆಯು
ಹಾಗೂ ಭಾಷಣಗಳನ್ನು ಮಾಡುವ ಅವಕಾಶ ಸಿಕ್ಕಿತು. ಇದರಿಂದ ನನ್ನಲ್ಲಿ ಮಾತ
ಡುವ ಮತ್ತು ಬರೆಯುವ ಸಾಮರ್ಥ್ಯವಿದೆಯೆಂದು ಭಾವಿಸಿಕೊಂಡೆ. ಕೆಲ ದಿ
ಗಳಲ್ಲಿಯೇ ನನಗೆ ಶಾಲೆಯೊಂದಿಗೆ ಅಭಿರುಚಿ ಬೆಳೆಯಿತು. ಅದೆಷ್ಟು ಅಂದರೆ ಶಾಲೆ
ದೀರ್ಘಾವಧಿ ಬಿಡುವು ಸಿಗುವ ಕಾಲದಲ್ಲಿ ನಾವು ಕೆಲವು ವಿದ್ಯಾರ್ಥಿಗಳು ದಿನಾಲು
ಒಂದು ಕಡೆ ಕೂಡುವೆವು, ಕೂಡಿ ಅಭ್ಯಾಸ ಮಾಡುವೆವು ಹಾಗೂ ಕೂಡಿ ಆಡುವೆ
ಎಂದು ಯೋಜಿಸುತ್ತಿದ್ದೆವು. ಆದರೆ ನಾನು ಎಂದೂ ಒಬ್ಬ ಒಳ್ಳೆಯ ಆಟಗಾರನಾಗಲಿ